# ಕೊಡಗು ಸಂಗಾತಿ

ಸಂಪಾದಕಿ : ಪಟ್ಟೆಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 3 ಸಂಚಿಕೆ : 1 ಜನವರಿ 1 ರಿಂದ 15, 1999 ಪುಟಗಳು : 24 ರೂ. 5





[ರೇಖಾಚಿತ್ರ : ಉಳುವಾರನ ಭೀಮಯ್ಯ ರಾಜೇಶ್, ಮೈಸೂರು]

ಸಂಗಾತಿ ಓದುಗರಿಗೂ, ಜಾಹೀರಾತುದಾರರಿಗೂ, ಹಿತೈಷಿಗಳಿಗೂ ಹಾಗೂ ನಾಡಿನ ಜನತೆಗೂ

ಹೊಸ ವರ್ಷದ ಶುಭಾಶಯಗಳು



ಪ್ರಕಟಣೆ

# ಕೊಡಗು ಗೌಡ ವಿದ್ಯಾ ಸಂಘ (ರಿ)

## ಕೊಡಗು, ಮಡಿಕೇರಿ

ಮೇಲ್ಕಂಡ ಸಂಘದಲ್ಲಿ ಸದಸ್ಯತನವನ್ನು ಹೊಂದಿರುವ ಎಲ್ಲಾ ಸದಸ್ಯರ ಗಮನಕ್ಕೆ ತರುವುದೇನೆಂದರೆ, ನಮ್ಮ ಸಂಘದಲ್ಲಿ ಕೆಲವು ಸದಸ್ಯರು **ರೂ. 11/ರ** ಮತ್ತು ಕೆಲವು ಸದಸ್ಯರು **ರೂ. 50/ರ** ಸದಸ್ಯತನವನ್ನು ಮಾತ್ರ ಹೊಂದಿದ್ದು ಸದಸ್ಯತನದ ಪೂರ್ತಿ ಹಣ **ರೂ. 100/–** ಆಗಬೇಕಿದೆ. ಆದ್ದರಿಂದ ಸದಸ್ಯತನವನ್ನು ಪೂರ್ತಿಗೊಳಿಸದ ಸದಸ್ಯರು ತಮ್ಮ ಸದಸ್ಯತನವನ್ನು ಪೂರ್ತಿಗೊಳಿಸಿ ಮುಂಬರುವ ಮಹಾಸಭೆಗೆ ಅರ್ಹರಾಗಬೇಕಾಗಿ ವಿನಂತಿಸಿಕೊಳ್ಳುತ್ತಿದ್ದೇವೆ.

**ಅಧ್ಯಕ್ಷರು ಮತ್ತು ಆಡಳಿತ ಮಂಡಳಿ**

---

## ಅಭಿನಂದನೆಗಳು

## ಶ್ರೀ ಊರುಬೈಲು ಪಿ. ಜಯಪ್ರಕಾಶ್

ತಾವು ನೂತನ ಸಾಲಿಗೆ ಕೊಡಗು ಜಿಲ್ಲಾ ಪಂಚಾಯತ್‌ನ ಅಧ್ಯಕ್ಷರಾಗಿ ಆಯ್ಕೆಯಾಗಿರುವುದು ತುಂಬ ಅಭಿನಂದನಾರ್ಹ. ತಮಗೆ ಕೊಡಗು ಗೌಡ ವಿದ್ಯಾಸಂಘದ ಆಡಳಿತ ಮಂಡಳಿಯಿಂದ ತುಂಬು ಹೃದಯದ ಅಭಿನಂದನೆಯನ್ನು ಅರ್ಪಿಸುತ್ತೇವೆ.

ತಮ್ಮ ಆಡಳಿತದಲ್ಲಿ ಕೊಡಗಿನ ಸಮಸ್ತ ಬಡವರ್ಗದ ಜನರಿಗೂ ತಮ್ಮ ಸೇವೆ ಸದುಪಯೋಗವಾಗಲಿ ಅಲ್ಲದೆ ಕುಲಗುರು ಶ್ರೀ ವೆಂಕಟರಮಣನು ಹೆಚ್ಚಿನ ಶಕ್ತಿ, ಆರೋಗ್ಯ, ಆಯುಷ್ಯವನ್ನು ಕರುಣಿಸಲಿ ಎಂದು ಹಾರೈಸುವ.

**ಅಧ್ಯಕ್ಷರು ಮತ್ತು ಆಡಳಿತ ಮಂಡಳಿ**
**ಕೊಡಗು ಗೌಡ ವಿದ್ಯಾಸಂಘ (ರಿ)**
**ಮಡಿಕೇರಿ, ಕೊಡಗು**





# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**
ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**
ಮುದ್ರಕರು :
**ಮಣ್ಣಂಡ್ರ ಕೆ. ತಮ್ಮಯ್ಯ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :
**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, ಮೈಸೂರು-12.
ಫೋನ್ : 0821/516771

**-ಸಂಪರ್ಕಿಸುವ ವಿಳಾಸ-**

**ಮಣಿ ನಂಗಾರ್**
C/o ನಂಗಾರ್ ಆಡಿಯೋ & ವೀಡಿಯೋ
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ-571 201
ದೂರವಾಣಿ : 08272/29372

**ಬೈತಡ್ಕ ಜಾನಕಿ ಬೆಳ್ಯಪ್ಪ**
ನಂ. 16, ಎಲ್.ಐ.ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಕುಂಭಗೌಡನ ಸೋಮಣ್ಣ**
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ-571237

**ಅಮ್ಮಾಜೀರ ಪೊನ್ನಪ್ಪ ಅಥವಾ**
**ಕಲ್ಲುಮುಟ್ಲು ಬಸಪ್ಪ**
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು-04
ದೂರವಾಣಿ-080/642822


## ಒಳನೋಟ



## ಅರೆಭಾಷಿಕ ವಿಭಾಗ




**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

# ಸಂಪಾದಕೀಯ :

## ವಿವಾಹಗಳ ವಿಚ್ಛೇದನ

ಹಿಂದೂ ಸಮಾಜದಲ್ಲಿ ವಿವಾಹ ವಿಚ್ಛೇದನ ಇತ್ತೀಚಿನ ವರ್ಷಗಳವರೆಗೆ ಕೇಳರಿಯದ ವಿಷಯವಾಗಿತ್ತು. ಹಿಂದುಗಳು ಒಂದು ಸಲ ಮದುವೆಯಾದರೆ ಅದು ಏಳೇಳು ಜನ್ಮದಲ್ಲೂ ಮದುವೆಯಾದ ವಧು-ವರರು ಅವರೆ ಸತಿ ಪತಿಗಳೆಂಬ ಭಾವನೆ ಇತ್ತು. ಈಗಲೂ ಕೆಲವರಲ್ಲಿ ಇದೆ. ಮದುವೆಯಾಗುವಾಗ ಧಾರಾ ಮಂಟಪದಲ್ಲಿ ಸಪ್ತಪದಿಯ ಅರ್ಥವೂ ಅದೇ. ಆ ಸಮಯದಲ್ಲಿ ಹೇಳುವ ಮಂತ್ರದ ಅರ್ಥವೂ ಅದೇ ಆಗಿದೆ.

ಆದರೆ ಈಗ ಈ ನಂಬಿಕೆ ತಿರುಗು ಮುರುಗು ಆಗಿದೆ. ಅದರಲ್ಲೂ ವಿದ್ಯಾವಂತ ಯುವಕ/ಯುವತಿಯರಿಗೆ ಈ ವಿಚಾರದಲ್ಲಿ ನಂಬಿಕೆ ಇಲ್ಲದಂತಾಗಿದೆ. ಕಾರಣ ಕೆಲವರಲ್ಲಿ ಪುನರ್ಜನ್ಮದಲ್ಲಿ ನಂಬಿಕೆ ಇಲ್ಲದಾಗಿದೆ. ಕರ್ಮದಲ್ಲಿ ಸಂಶಯ ಉಂಟಾಗಿದೆ. ಕುವೆಂಪುನವರಂತಹ ಮಹಾ ಕವಿಗಳಿಗೂ ಕರ್ಮದಲ್ಲಿ ನಂಬಿಕೆ ಇತ್ತು. ಅವರು ಒಂದು ಕಡೆ ಹೀಗೆ ಹೇಳುತ್ತಾರೆ. "ಪ್ರಪಂಚ ಇರುವುದು ಕರ್ಮವನ್ನು ಸವೆಯುವುದಕ್ಕಾಗಿ ಕರ್ಮ ಸವೆಯುವುದರಿಂದ ಪ್ರಪಂಚ ಇದೆ". ಇದು ಬಹಳ ದೊಡ್ಡ ಆಧ್ಯಾತ್ಮಿಕ ತತ್ವ. ಆದರೆ ಈ ತತ್ವವನ್ನು ಎಷ್ಟು ಜನ ಅರಿತಿದ್ದಾರೆ ಎಂಬ ಪ್ರಶ್ನೆ ಏಳುತ್ತದೆ.

ಕರ್ಮದ ವಿಚಾರ ಇರಲಿ, ಈಗ ವಿವಾಹ ವಿಚ್ಛೇದನ ದಿನೇ ದಿನೇ ಹೆಚ್ಚಾಗುವುದಕ್ಕೆ ಸಮಾಜದ ಧುರೀಣರು ಕಾರಣವನ್ನು ಕಂಡಿದ್ದಾರೆಯೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಈಗ ನಾವು ಭಾರತದ ಜನರ ಅಂಕಿ ಅಂಶಗಳನ್ನು ಈ ವಿಷಯದಲ್ಲಿ ಲೆಕ್ಕ ಹಾಕಿದರೆ ದೊಡ್ಡ ದೊಡ್ಡ ನಗರಗಳಲ್ಲಿ ಹಳ್ಳಿಗಿಂತ ಶೇಕಡಾವಾರು ಹೆಚ್ಚಾಗಿರುವುದು ಕಂಡುಬರುತ್ತದೆ. ಬೆಂಗಳೂರು ಮಹಾನಗರದಲ್ಲಿ ಕೌಟುಂಬಿಕ ವ್ಯಾಜ್ಯಗಳ ಕೋರ್ಟು 1985 ರಲ್ಲಿ ಪ್ರಾರಂಭವಾಯಿತು. ಆಗ 3500 ಕೌಟುಂಬಿಕ ವ್ಯಾಜ್ಯಗಳಿದ್ದವು. ಈಗ ಅದು 45,000 [ನಲ್ವತ್ತೈದು ಸಾವಿರ]ಕ್ಕೇರಿದೆ. 1985 ರಲ್ಲಿ ಒಂದು ಕೋರ್ಟು ಇದ್ದದ್ದು ಈಗ 3 ಕೋರ್ಟುಗಳಾಗಿವೆ. ಹೀಗೆ ಹೆಚ್ಚಾಗುವುದಕ್ಕೆ ಕಾರಣವೇನು ? ಗಂಡ ಹೆಂಡಿರಲ್ಲಿ ಅನ್ಯೋನ್ಯ ಪ್ರೀತಿ, ವಿಶ್ವಾಸಗಳಿಲ್ಲದಿರುವುದು. ಇದಕ್ಕೂ ಕಾರಣವೇನು ? ಗಂಡ ಯಾ ಹೆಂಡತಿ ತಾನು ಮೇಲು, ತನ್ನ ಮನೆತನದವರು ಹೆಂಡತಿ ಯಾ ಗಂಡನ ಮನೆತನದವರಿಗಿಂತ ಮೇಲು ಎಂಬ ಭಾವನೆಯಿಂದ ಗಂಡ ಯಾ ಹೆಂಡತಿಯನ್ನು ಅವರ ವಿದ್ಯೆ, ಹಣ, ಅಧಿಕಾರ, ನಾಗರೀಕತೆಯ ಸೌಲಭ್ಯದ ಮೇಲೆ ಮೇಲು ಕೀಳೆಂಬುವ ಭಾವನೆ, ನಡೆ-ನುಡಿಗಳ ವ್ಯತ್ಯಾಸ ಒಂದು ರೀತಿಯದ್ದಾದರೆ, ವಿದ್ಯಾವಂತ ಯುವಕರು ತಾನು ಕಷ್ಟಕಟ್ಟಿ ಅಭಿವೃದ್ಧಿಯಾಗುವುದನ್ನು ಬಿಟ್ಟು ತನ್ನ ಹೆಂಡತಿಯ ಕಡೆಯಿಂದ ಹಣ ಬಂದರೆ ತಾನು ಯಾವ ರೀತಿಯಲ್ಲಿ ಸಮಾಜದಲ್ಲಿ ದೊಡ್ಡ ಮನೆಯನ್ನು ಕಟ್ಟಿಸಿ, ವಾಹನವನ್ನು ಕೊಂಡು ತನ್ನ ಜೀವನದಲ್ಲಿ ಯಾವ ಕೊರತೆಯೂ ಇಲ್ಲದೇ ಜೀವನ ನಡೆಸಬೇಕೆಂಬ ಅತೀ ಆಸೆಯಿಂದ ತನ್ನ ಹೆಂಡತಿಯ ತೌರು ಮನೆಯಿಂದ ಆದಷ್ಟು ಕಬಳಿಸುವ ಯೋಚನೆಯಿಂದಾಗಿ ಹೆಂಡತಿಗೆ ಕಿರುಕುಳ ಕೊಡುವುದು ಇನ್ನೊಂದು ಮುಖವಾದರೆ, ಗಂಡ ಹೆಂಡತಿ ಇಬ್ಬರೂ ವಿದ್ಯಾವಂತರಾಗಿದ್ದರೆ ಒಬ್ಬರು ಇನ್ನೊಬ್ಬರಿಗೇನು ಕಡಿಮೆ ಇಲ್ಲವೆಂಬ ಸ್ವತಂತ್ರ ಸ್ವೇಚ್ಛಾ ಜೀವನದ ಆಸೆ ಮದುವೆ ಎಂಬುದು ಸಮಾಜದ ದೃಷ್ಟಿಯಲ್ಲಿ ಮಾತ್ರ. ಮದುವೆ ತನ್ನ ಸ್ವೇಚ್ಛಾ ನಡವಳಿಕೆಗೆ ಸಮಾಜಕ್ಕೆ ತೋರಿಸುವುದಕ್ಕೆ ಒಂದು ಎಂಬ ಭಾವನೆಯ ದಾರಿಯೂ ಇನ್ನೊಂದು ಮುಖ.

ಪಾಶ್ಚಾತ್ಯ ದೇಶಗಳಲ್ಲಿ ಹಿಂದುಗಳಲ್ಲಿರುವಂತೆ ಮದುವೆ ಒಂದು ಪ್ರಜ್ವಲವಾದ ವಿಧಿ ಎಂಬುದರ ಬದಲು ಅದೊಂದು ಜೀವನ ಸಂಗಾತಿಗಳ ಒಡಂಬಡಿಕೆ ಎಂಬ ಅರ್ಥ. ಅಲ್ಲಿ ಒಬ್ಬ ಗಂಡಸು ಯಾ ಹೆಂಗಸು ಮದುವೆಯಾಗಿ ಅವರಿಬ್ಬರಿಗೆ ಇಷ್ಟವಿಲ್ಲದಿದ್ದರೆ ವಿಚ್ಛೇದನ ಮಾಡಿಕೊಂಡು ಬೇರೆ ಮದುವೆಯಾಗಬಹುದು. ಅಲ್ಲಿಯೂ ಅವರಿಗೆ ಸರಿಬಾರದಿದ್ದರೆ ಪುನಃ ವಿಚ್ಛೇದನವಾಗಬಹುದು. ನಮ್ಮಲ್ಲಿಯೂ ಕಾನೂನಿನನ್ವಯ ಆ ರೀತಿ ಮಾಡುವುದಕ್ಕೆ ಯಾವ ತೊಂದರೆ ಇಲ್ಲ. ಆದರೆ ನಮ್ಮ ಸಮಾಜ ಅಂತ ರೀತಿಯ ವಿಚ್ಛೇದನವನ್ನು ಒಪ್ಪುವುದಿಲ್ಲ. ಆ ರೀತಿಯಾದರೆ, ಆ ರೀತಿಯ ದಂಪತಿಗಳಿಗೆ ಗೌರವವಿಲ್ಲ. ಆದ್ದರಿಂದ ನಮ್ಮಲ್ಲಿ ವಿವಾಹ ವಿಚ್ಛೇದನ ಸುಲಭವಲ್ಲ. ಕಷ್ಟವೋ ಸುಖವೋ ಒಂದು ಸಲ ಮದುವೆಯಾದರೆ ಅದನ್ನು ತಮ್ಮ ತಮ್ಮಲ್ಲಿಯೇ ಸುಧಾರಿಸಿಕೊಂಡು ಸಾಯುವವರೆವಿಗೂ ಗಂಡ ಹೆಂಡತಿಯಾಗಿ ಬಾಳಿ ಬದುಕುತ್ತಾರೆ. ನಮ್ಮಲ್ಲಿ ಕಷ್ಟ ಇದ್ದರೂ ಜೀವನದಲ್ಲಿ ತೃಪ್ತಿ ಇದೆ. ಆದರೆ ಪಾಶ್ಚಾತ್ಯ ದೇಶದ ಜನರಲ್ಲಿ ತೃಪ್ತಿ ಇಲ್ಲ, ಮನಶಾಂತಿ ಇಲ್ಲ. ಈ ವಿಷಯವನ್ನು ಮನಗೊಂಡ ಸ್ವಾಮಿ ವಿವೇಕಾನಂದರು ಇದನ್ನು ನೂರಾರು ವರ್ಷಗಳ ಹಿಂದೆಯೇ ಈ ಮಾತನ್ನು ಹೇಳಿದ್ದಾರೆ.

"The life in westren countries to see from the outside it is glamouring but inside it is pussing where as in India the life from out side it is gloomy and where as inside it is mersy making".

[4ನೇ ಪುಟ ನೋಡಿ]

# ದಿ|| ಐಚೆಟ್ಟಿರ ಸುಬ್ಬಯ್ಯ I.A.S.

## (ಶ್ರೀಯುತರು ನಿಡ್ಯಮಲೆ ಮುದ್ದಪ್ಪನವರ ಪ್ರಾಣ ಸ್ನೇಹಿತರಾಗಿ ಜನಾಂಗಕ್ಕಾಗಿ ಸಹಕರಿಸಿದವರು)

ದಿವಂಗತ ಐಚೆಟ್ಟಿರ ಸುಬ್ಬಯ್ಯನವರು ವಿರಾಜಪೇಟೆ ತಾಲೋಕಿನ ನಾಲ್ಕೇರಿ ಗ್ರಾಮದಲ್ಲಿ ಜನಿಸಿ ಪ್ರಾಥಮಿಕ ವಿದ್ಯಾಭ್ಯಾಸದ ನಂತರ ಮಡಿಕೇರಿ ಸೆಂಟ್ರಲ್ ಹೈಸ್ಕೂಲಿನಲ್ಲಿ ಮೆಟ್ರಿಕ್ಯುಲೇಶನ್‌ನವರೆಗೆ ಓದಿ ಮಂಗಳೂರಿನ ಸೇಂಟ್ ಎಲೋಸಿಯೋಸ್ ಕಾಲೇಜಿನಲ್ಲಿ ಪದವಿಯನ್ನು ಪಡೆದು ಮದ್ರಾಸ್‌ನಲ್ಲಿ ಎಂ.ಬಿ.ಬಿ.ಎಲ್. ಪದವಿಯನ್ನು ಪಡೆದು ಮಡಿಕೇರಿಯಲ್ಲಿ ವಕೀಲರಾಗಿ ಸೇವೆ ಸಲ್ಲಿಸುತ್ತಿದ್ದಾಗ ರಾಜಕೀಯಕ್ಕೆ ಧುಮುಕಿ ಕೊಡಗಿನ ಜನಪ್ರತಿನಿಧಿ ಕೌನ್ಸಿಲಿನ ಸದಸ್ಯರಾಗಿದ್ದರು. ನಂತರ

---

ಲೇಖನ : **ಚೇಂದ್ರಿಮಾಡ ಮುತ್ತಪ್ಪ**, ಕುಶಾಲನಗರ

---

ಅವರು ಮಡಿಕೇರಿಯ ಮುನ್ಸಿಫ್ ಆಗಿ ನೇಮಕಗೊಂಡು ಸ್ವಲ್ಪ ಸಮಯದಲ್ಲಿಯೇ ಅಂದರೆ ರಾವ್ ಬಹದ್ದೂರ್ ಕೋಡಿರ ಉತ್ತಪ್ಪನವರ ನಂತರ ಕೊಡಗಿನ ಅಸಿಸ್ಟೆಂಟ್ ಕಮೀಷನರ್ ಹಾಗೂ ಜಿಲ್ಲಾ ಮ್ಯಾಜಿಸ್ಟ್ರೇಟರಾದರು. ಆ ಸಮಯದಲ್ಲಿಯೇ ಅವರು ಕೊಡಗಿನ ಡೆವಲಪ್‌ಮೆಂಟ್ ಕಮೀಷನರಾಗಿ ಅವರ ಕೆಳಗೆ ದಿ|| ನಡಿಕೇರಿಯಂಡ ಮಂದಣ್ಣನವರು ಸಹಾಯಕ ಡೆವಲಪ್‌ಮೆಂಟ್ ಕಮೀಷನರ್ ಆಗಿ ನೇಮಕಗೊಂಡು ಸೋಮವಾರಪೇಟೆ ಮತ್ತು ವಿರಾಜಪೇಟೆಯ ಪೊನ್ನಂಪೇಟೆಯಿಂದ ದಕ್ಷಿಣಕ್ಕಿರುವ ಪ್ರದೇಶವನ್ನು ರಾಷ್ಟ್ರೀಯ ವಿಸ್ತರಣಾ ಸೇವೆಗೆ ಸೇರಿಸಿ ಶ್ರೀ ಸುಬ್ಬಯ್ಯನವರ ಹಾಗೂ ಇನ್ನೊಬ್ಬ ನಿಷ್ಠಾವಂತ ಅಧಿಕಾರಿ ಶ್ರೀ ಮಂದಣ್ಣನವರ ನೇತೃತ್ವದಲ್ಲಿ ಕೊಡಗಿನಲ್ಲಿ ಗ್ರಾಮಪಂಚಾಯತಿ ಸಹಕಾರಿ ತತ್ವ ವ್ಯವಸಾಯ, ಗ್ರಾಮೀಣ ರಸ್ತೆ, ಮಹಿಳಾ ಸಮಾಜ ಹಾಗೂ ಯುವಕ ಸಂಘಗಳಿಗೆ ತುಂಬಾ ಉತ್ತೇಜನ ದೊರೆತು ಕೊಡಗಿನಲ್ಲಿ ಗ್ರಾಮೀಣ ಅಭಿವೃದ್ಧಿ ಕಾರ್ಯ ಬಹಳ ತುರ್ತು ಪಥದಲ್ಲಿ ಸಾಗಿ ಕೊಡಗು ಬೇರೆ ರಾಜ್ಯಗಳಿಗೆ ಮಾದರಿಯ ರಾಜ್ಯವಾಗಿ ಹೊರ ಹೊಮ್ಮಿತು. ಇದರಲ್ಲಿ ದಿ|| ನಡಿಕೇರಿಯಂಡ ಮಂದಣ್ಣನವರನ್ನು ಕೊಡಗಿನ ಜನತೆ ಇಂದಿಗೂ ನೆನೆಸಿಕೊಳ್ಳುತ್ತಾರೆ.

ಶ್ರೀ ಸುಬ್ಬಯ್ಯನವರು ಅಸಿಸ್ಟೆಂಟ್ ಕಮೀಷನರ್ ಆಗಿದ್ದಾಗ ಕೊಡಗಿನ ಸ್ಟಾಫ್ ಸೆಲೆಕ್ಷನ್ ಬೋರ್ಡಿನ ಅಧ್ಯಕ್ಷರಾಗಿ ಯಾವುದೇ ಬೇಧವಿಲ್ಲದೆ ಉದ್ಯೋಗಾವಕಾಶ ಮಾಡಿಕೊಟ್ಟಿದ್ದಾರೆ. ಅಲ್ಲದೆ ಬಡ ಬಗ್ಗರಿಗೆ ಸರ್ಕಾರದ ಪೈಸಾರಿ ಜಾಗವನ್ನು ಹಂಚುವುದರಲ್ಲಿ ತುಂಬಾ ಸಹಾಯಕರಾಗಿದ್ದಾರೆ ಶ್ರೀ ಐಚೆಟ್ಟಿರ ಸುಬ್ಬಯ್ಯನವರು ದಿ|| ನಿಡ್ಯಮಲೆ ಮುದ್ದಪ್ಪನವರ ಆಪ್ತ ಸ್ನೇಹಿತರಾದುದರಿಂದ ಕೊಡಗಿನ ಗೌಡರಿಗೆ ನ್ಯಾಯಬದ್ಧವಾದ ಸಹಾಯವನ್ನು ಮಾಡಿದ್ದಾರೆ. ಇದರಿಂದಾಗಿ ಶ್ರೀ ಸುಬ್ಬಯ್ಯನವರನ್ನು ಗೌಡ ಜನರು ಈಗಲೂ ನೆನೆಸಿಕೊಳ್ಳುತ್ತಿದ್ದಾರೆ. ದಿ|| ಶ್ರೀ ನಿಡ್ಯಮಲೆ ಮುದ್ದಪ್ಪನವರು ಮತ್ತು ಶ್ರೀ ಸುಬ್ಬಯ್ಯನವರು ಬಾಲ್ಯ ಸ್ನೇಹಿತರಾಗಿದ್ದು ಅವರುಗಳ ಜೀವನದ ಅಂತ್ಯದವರೆಗೂ ತುಂಬಾ ಅನ್ಯೋನ್ಯವಾಗಿದ್ದು ಸ್ನೇಹದ ನಿಜವಾದ ಮಾದರಿ ಇವರಿಬ್ಬರಲ್ಲಿ ಕಾಣಬಹುದಾಗಿತ್ತು.

ದಿ|| ಶ್ರೀ ಸುಬ್ಬಯ್ಯನವರು ನಂತರ ಕೊಡಗು ಸರ್ಕಾರದ ಚೀಫ್ ಸೆಕ್ರೆಟರಿಯಾಗಿ 1956 ರವರೆಗೆ ಸೇವೆ ಸಲ್ಲಿಸಿ 1956 ರಲ್ಲಿ ಕೊಡಗು ವಿಶಾಲ ಮೈಸೂರಿಗೆ ವಿಲೀನವಾದಾಗ ಕೊಡಗಿನ ಪ್ರಪ್ರಥಮ ಜಿಲ್ಲಾಧಿಕಾರಿಯಾಗಿ ನೇಮಕಗೊಂಡು ಇವರಿಗೆ ಸರ್ಕಾರ ಐ. ಎ. ಎಸ್. ಪದವಿಯನ್ನು ದಯಪಾಲಿಸಿತು. ಕೊಡಗಿನವರಲ್ಲಿ ಮೊತ್ತ ಮೊದಲು ಐ. ಪಿ. ಎಸ್. ಆದವರು ಶ್ರೀ ಸುಬ್ಬಯ್ಯನವರು ಮೊದಲಿಗರು. ಶ್ರೀ ಸುಬ್ಬಯ್ಯನವರು ಒಬ್ಬ ಮೇಧಾವಿ ನಿಷ್ಠಾವಂತ ಹಾಗೂ ಯಾವುದೇ ಆವೇಶಕ್ಕೊಳಗಾಗದ ಶ್ರೇಷ್ಠ ಮಟ್ಟದ ಒಬ್ಬ ಅಧಿಕಾರಿಯಾಗಿದ್ದರು.

ಶ್ರೀ ಸುಬ್ಬಯ್ಯನವರು ಮಡಿಕೇರಿ ಹತ್ತಿರದ ಹಾಲೇರಿಯ ಮುದ್ದುರ ಬೆಳ್ಯಪ್ಪನವರ ಪುತ್ರಿಯನ್ನು ಮದುವೆಯಾಗಿ ಶ್ರೀ ಬೆಳ್ಯಪ್ಪನವರು ಶ್ರೀ ಸುಬ್ಬಯ್ಯನವರ ಉಚ್ಛ ವಿದ್ಯಾಭ್ಯಾಸಕ್ಕೆ ಸಹಾಯಕರಾಗಿ ಶ್ರೀ ಸುಬ್ಬಯ್ಯನವರ ಪುರೋಭಿವೃದ್ಧಿಗೆ ಕಾರಣಕರ್ತರಾಗಿದ್ದಾರೆ. ಶ್ರೀ ಸುಬ್ಬಯ್ಯನವರಿಗೆ 5 ಜನ ಮಕ್ಕಳು. ಪ್ರಥಮ ಪುತ್ರಿ ಗಂಗಮ್ಮನವರು ಎಂ.ಎ.ಬಿ.ಎಲ್. ಪದವಿ ಪಡೆದು ಅವರು ನ್ಯಾಯಮೂರ್ತಿ ಪಾಲೆಕಂಡ ಬೋಪಣ್ಣನವರಿಗೆ ಮದುವೆಯಾಯಿತು. ಪ್ರಥಮ ಪುತ್ರ ಚೆಂಗಪ್ಪನವರು ಇಂಜಿನಿಯರ್ ಆಗಿ ಈಗ ನಿವೃತ್ತರಾಗಿದ್ದಾರೆ. ಇನ್ನೊಬ್ಬ ಮಗ ಶ್ರೀ ಬಿದ್ದಪ್ಪನವರು ಸಹ ಹೆಚ್ಚಿನ ವಿದ್ಯಾಭ್ಯಾಸ ಮಾಡಿ ದೊಡ್ಡ ಹುದ್ದೆಯಲ್ಲಿದ್ದರು. ಎರಡನೇ ಮಗಳು ಡಾಕ್ಟರಾಗಿ ಮಡಿಕೇರಿಯ ಸುಬ್ಬಯ್ಯನವರ ಮನೆಯಲ್ಲಿಯೇ ಇದ್ದಾರೆ. ಮೂರನೇ ಪುತ್ರಿ ಶ್ರೀಮತಿ ಕಾವೇರಿಯವರು ಸಿಂಡಿಕೇಟ್ ಬ್ಯಾಂಕಿನ ಮ್ಯಾನೇಜರ್‌ರಾಗಿ ನಿವೃತ್ತಿಯಾಗಿದ್ದಾರೆ. ●

# ಕಳ್ಳ

ಒಂದು ವಾರದಿಂದ ಮನೆಲಿ ಕಳ್ಳತನ ಜಾಸ್ತಿಯಾಗಿದೆ. ಮೊದಲು ನನ್ನವರ ಪೆನ್ನು ಮಾಯವಾಯ್ತು. ನನಗಷ್ಟು ಬೈದು ಆಫೀಸಿಗೆ ಹೋದರೂ ಮರುದಿನ ನನ್ನ ಹೇರ್‌ಪಿನ್. ಮತ್ತೆರಡು ಕುಡಿಯುವ ಲೋಟಗಳು. ಮಧ್ಯಾಹ್ನ ಟೀ ಸೋಸುವ ಜಾಲರಿ, ಬೂಟಿನ ಲೇಸು, ಬಾಚಣಿಗೆ, ಸ್ಟಿಕ್ಕರ್, ಬಿಂದಿ ಪ್ಯಾಕ್, ಪಾಪುವಿನ ಆಟದ ಗೊಂಬೆ, ಅದೇ ತಾನೇ ಪೋಸ್ಟಿನಲ್ಲಿ ಬಂದ ಕೊಡಗು ಸಂಗಾತಿ, ತುಷಾರ ಪತ್ರಿಕೆಗಳು, ನನ್ನ ಪುಟ್ಟ ಪರ್ಸ್...ಹೀಗೆ ಕಾಣೆಯಾದವ್ವರ ಪಟ್ಟಿ ಬೆಳೆ ಯುತ್ತಾ ಹೋಯ್ತು.

ಮನೆಗೆ ಬರುವವರು ಕಾಫಿ ಕುಡಿದಾಕ್ಷಣ ಲೋಟ ಒಳ ಗೊಯ್ದೆ. ಅಕ್ಕ-ಪಕ್ಕದ ಚಿಲ್ಟು-ಪಿಲ್ಟುಗಳಿಗೆಲ್ಲಾ ಬಾಗಿಲಿ ನಿಂದಲೇ ಟಾಟಾ ಮಾಡಿ ಕಳಿಸಿದೆ. ಮನೆಗೆ ಬರುವವರನ್ನು ಕಳ್ಳರೇನೋ ಎಂದು ಒಂದುಕ್ಷಣ ದಿಟ್ಟಿಸಿ ಅವರಿಗೆ ಮುಜುಗರ ಉಂಟುಮಾಡಿದೆ. ಹೊರಗಿನ ವರಾಂಡದಿಂದ ಎಲ್ಲಾ ಚಿಕ್ಕ ಪುಟ್ಟ ವಸ್ತುಗಳನ್ನು ರೂಮಿನಲ್ಲಿ ಪೇರಿಸಿದೆ ಆದರೆ...ಕಳ್ಳ ಸಿಗಲಿಲ್ಲ. ವಸ್ತುಗಳು ಮಾಯವಾಗುವುದು ತಪ್ಪಲಿಲ್ಲ. ನನ್ನ ವರು ನನಗೂ ನಾನು ಅವರಿಗೂ ಬೈಯ್ದುಕೊಂಡದ್ದಷ್ಟೇ ಲಾಭ.

ಕಳ್ಳನ ಲಕ್ಷಣಗಳು ವಿಚಿತ್ರವಾಗಿದ್ದವು. ಮೇಜಿನ ಮೇಲೆ ಮರೆತಿದ್ದ ಚಿನ್ನದುಂಗುರ ಬಿಟ್ಟು ನೆಲಕ್ಕೆ ಬಿದ್ದ ಸೆಂಟ್ ಬಾಟಲ್ ಕದಿಯೋದೇ! ಈ ಸೌಂದರ್ಯ ಪ್ರಿಯನಾದರೂ [ಬಾಚಣಿಗೆ, ಕನ್ನಡಿ, ಸ್ಟಿಕ್ಕರ್ ಬಿಂದಿ, ಪೌಡರ್ ಎಲ್ಲಾ ಕದ್ದಿದ್ದರಿಂದ ಈ ನಿರ್ಧಾರಕ್ಕೆ ಬಂದೆ]. ದುರಾಸೆಯವನಲ್ಲದ ಕನ್ನನ ಬಗ್ಗೆ ಹೆಮ್ಮೆ ಪಟ್ಟೆ. ಆದರೆ ಇಡೀ ದಿನ ಬಾಗಿಲೇ ತೆಗೆ ಯದೇ ಕಾದರೂ ಕಳ್ಳ ಸಿಗಲಿಲ್ಲ. ಹಾಗೇ ಹಾಸಿಗೆಯ ಮೇಲೆ ಇಟ್ಟಿದ್ದ ವಾಚ್ ಮಾಯವಾಯ್ತು. ನಮ್ಮದೋ ತಾರಸಿ ಮನೆ. ಹೆಂಚು ತೆಗೆದು ಕಳ್ಳ ಬರುವ ಸಾಧ್ಯತೆಯಿಲ್ಲ! ವಾಚ್ ಮಾಯವಾದಾಗ ಮಾತ್ರ ಕಳ್ಳನ ಹುಡುಕಾಟ ತೀವ್ರಗೊಳಿಸಿ ದೆವು. ನನ್ನವರು ನನ್ನನ್ನೂ ಸೂಕ್ಷ್ಮವಾಗಿ ವಾಚ್ ಮಾಡು ವುದು ಕಂಡು ಬಂತು! ನಾನು...ಬೇರೆ ಯಾರೂ ಸಿಗದಿದ್ದರಿಂದ ಪುಟ್ಟ ಕೂಸು 'ಕುಶಲ್' ಮೇಲೆ ಕಣ್ಣಿಟ್ಟೆ. ಮಗು 'ಅಬ್ಬ...ಅಪ್ಪಾ' ಅಂತ ನಗು ನಗುತ್ತಾ ಒಳಗಿನಿಂದ ಎರಡು ಟೊಮೊಟೋ ಒಂದು ಈರುಳ್ಳಿ ತೆಗೆದುಕೊಂಡ. ಪುಟು ಪುಟು ನಡೆಯುತ್ತಾ ರೂಮಿಗೆ ಹೋದ. ನನಗೂ ಕೆಲಸವಿರಲಿಲ್ಲ. ನಾನೂ ರೂಮಿಗೆ ಹೋದೆ. ಪಾಪು ನನ್ನನ್ನು ಕಂಡದ್ದೇ ಬೇಗ ಬೇಗ ಹಾಸಿಗೆ ಎತ್ತಿದ. ಹಾಗೇ ಅತ್ತಿತ್ತ ನೋಡುತ್ತಾ ಬೇಗ ಬೇಗ ಟೊಮೊಟೊ, ಈರುಳ್ಳಿ [ಈಗ ಬೆಲೆ ಬೇರೆ ಜಾಸ್ತಿ] ಹಾಸಿಗೆ ಕೆಳಗಿಟ್ಟ. ನಾನೂ ಕುತೂಹಲದಿಂದ ಹಾಸಿಗೆ ಎತ್ತಿ ನೋಡಿದೆ. ಆ ಹಾಸಿಗೆ ಕೆಳಗೇ ಆಗ ತಾನೇ ಕಾಣೆಯಾದ ವಾಚಿನಿಂದ ಹಿಡಿದು ಬಾಚಣಿಗೆ, ಸೆಂಟ್...ಎಲ್ಲಾ ವಸ್ತುಗಳೂ ಅಡಗಿ ಮುಸಿ ಮುಸಿ ನಗುತ್ತಿದ್ದವು.

ಕಳ್ಳ ಸಿಕ್ಕಿಬಿದ್ದ, ನನ್ನ ನೋಡಿ ನಸುನಕ್ಕ.

—ರೇಣುಕಾ ವಸಂತ್, ಮೈಸೂರು.

[2ನೇ ಪುಟದಿಂದ]

ಅಂದರೆ ಪಾಶ್ಚಾತ್ಯ ದೇಶಗಳಲ್ಲಿ ಹೊರಗಿನಿಂದ ನೋಡಿದರೆ ಬಹಳ ವೈಭವದಿಂದ ತೋರುತ್ತದೆ. ಆದರೆ ಒಳಗಿಂದ ನೋಡಿದರೆ ಕೀಳಾಗಿ ದುರ್ವಾಸನೆ ಬರುತ್ತದೆ. ಆದರೆ ಇಂಡಿಯಾ ದಲ್ಲಿ ಹೊರಗಿನಿಂದ ನೋಡಿದರೆ ಬಹಳ ಅಸಹ್ಯ ವಾಗಿ ಕಾಣುತ್ತದೆ. ಆದರೆ ಜನರ ಜೀವನದ ಒಳಹೊಕ್ಕಿ ನೋಡಿದರೆ ಅವರು ಸಂತೋಷದಿಂದ ಕೂಡಿದ್ದಾರೆ. ಈ ಮಾತು ಗಳನ್ನು ನಮ್ಮವರು ನೆನೆಸಿಕೊಂಡರೆ ನಮ್ಮ ವಿವಾಹ ಒಂದು ಪೂಜ್ಯವಾದ ವಿಧಿ ಎಂಬುದನ್ನು ಮರೆತು ಪಾಶ್ಚಾತ್ಯರಂತೆ ವರ್ತಿಸಿದಾಗ, ಮದುವೆ ಒಂದು ಹಣ ಗಳಿಸುವ ವ್ಯಾಪಾರವೆಂಬ ಭಾವನೆ ಇದ್ದು ತಾನು ತನ್ನವರೇ ಮೇಲೆಂಬ ಭಾವನೆಯಿಂದ ನಮ್ಮ ಯುವಕ/ಯುವತಿಯರು ತಿಳಿಯದೆ ಪ್ರೀತಿಸಿದ, ಸನು ನ್ಯಯ ಜೀವನದಿಂದ ನಮ್ಮಲ್ಲಿ ವಿವಾಹ ವಿಚ್ಛೇದನೆ ಕಡಿಮೆ ಯಾಗಬಹುದೇ ಎಂದು ಸಂಗಾತಿಯ ಆಸೆ. ○

## ನೂತನ ಅಧ್ಯಕ್ಷರಾಗಿ ಆಯ್ಕೆ

ಕೊಡಗು ಜಿಲ್ಲಾ ಪಂಚಾಯ್ತಿ ಅಧ್ಯಕ್ಷರಾಗಿ ಆಯ್ಕೆ ಆದ ಶ್ರೀ ಊರುಬೈಲು ಪಿ. ಜಯಪ್ರಕಾಶ್‌ರವರಿಗೂ ಮತ್ತು ತಾಲೂಕು ಪಂಚಾಯ್ತಿ ಉಪಾಧ್ಯಕ್ಷೆಯಾಗಿ ಆಯ್ಕೆಯಾದ ಶ್ರೀಮತಿ ತೋಟಂಬೈಲು ಪ್ರೇಮಾ ಆನಂದರವರಿಗೆ ಜನಾಂಗದ ಪರವಾಗಿ ಸಂಗಾತಿಯ ಶುಭ ಹಾರೈಕೆಗಳು.

## ಧನ್ಯವಾದಗಳು

ಪಳಂಗೋಡು ಚಂದ್ರಶೇಖರ್ ಮತ್ತು ರಾಣಿಚಂದ್ರಶೇಖರ್ ರವರು ಪತ್ರಿಕೆಯ ಅಭಿವೃದ್ಧಿ ಬಯಸಿ ಜೀವಾವಧಿ ಸದಸ್ಯತನ ರೂ. 2000/– [ಎರಡು ಸಾವಿರ] ನೀಡಿ ಸಹಕರಿಸಿದ್ದಾರೆ. ಇವರಿಗೆ ಸಂಗಾತಿಯ ಧನ್ಯವಾದಗಳು.

—ಸಂಪಾದಕಿ

# ಅಮ್ಮಾ

ಅಮ್ಮ ಎಂಬ ಪದವು ಬಹು ಮುಖ್ಯವಾದುದು ಸ್ವಾಸ್ಥ್ಯವುಳ್ಳ, ವಿನಯ, ಕರುಣೆ, ನೀತಿ, ಧರ್ಮ, ಪ್ರೀತಿ ವಾತ್ಸಲ್ಯ, ಅಹಿಂಸೆ, ಎಲ್ಲಾ ರೀತಿಯಲ್ಲಿ ಅಡಗಿರುವುದು ಅಮ್ಮ ಎಂಬ ಪದವು ಮೊದಲುಗೊಂಡು ರೂಪಿಸಿಕೊಳ್ಳುತ್ತದೆ. ನಮ್ಮ ಹುಟ್ಟುವಿಗೆ ಅಮ್ಮನೆ ಕಾರಣ ಎಂದು ಹೇಳಬಹುದು. ಒಂಭತ್ತು ತಿಂಗಳು ಹೊತ್ತು ಹೆತ್ತು ಸಾಕಿ ಸಲಹುವಳು ಅಮ್ಮ. ಒಂದು ಮಗು ಪ್ರೀತಿಯಿಂದ ಕರೆಯುವುದು ಅಮ್ಮಾ...ಎಂದು, ಒಬ್ಬ ಬಿಕ್ಷುಕ ಕರೆಯುವುದು ಅಮ್ಮಾ.. ಎಂದು. ಇವುಗಳ ಅಂತಹಕ್ಕೆ ಮೂಲತಃ ಹೆಣ್ಣು, ಅವಳನ್ನು ಯಾರೂ ಹೆಣ್ಣು ಅಥವಾ ತಾಯಿಯೆಂದು ಯಾರೂ ಕರೆಯುವುದಿಲ್ಲ. ಮಗು ಜನನ ಕಾಲದಲ್ಲಿ ತಾಯಿಯಾದವಳು ನೋವನ್ನು ಅನುಭವಿಸಿ ಅಮ್ಮಾ... ಅಮ್ಮಾ ಎಂದೇ ನೋವನ್ನು ನುಂಗುತ್ತಾಳೆ. ಆ ಒಂದು ಅನುಕಂಪದಿಂದಲೇ ಜನನವಾದ ಮಗುವನ್ನು ಕಂಡು ತನ್ನ ಅನುಭವದ ನೋವನ್ನು ಕಂದಮ್ಮನಲ್ಲಿ ಮರೆಯುತ್ತಾಳೆ.

ಆ ಮಗು ಅಂಬೆಗಾಲು ಇಟ್ಟು ಪುಟ್ಟ, ಪುಟ್ಟ ಹೆಜ್ಜೆ ಇಟ್ಟು ನಡೆಯುವಾಗ ಎಲ್ಲಿಲ್ಲದ ಸಂತೋಷ ಮಗು ಅಮ್ಮಾ... ಎಂದು ಕರೆದಾಗ ಕರುಳು ಕಿತ್ತು ಬರುವಂತಹ ಪ್ರೇರಣೆ, ಅಮ್ಮನಾದವಳು ಎಂತಾ ಪುಟ್ಟ, ತಿಂಡಿಬೇಕಾ ? ಹಾಲು ಕೊಡಲಾ ? ಪುಟ್ಟನಿಗೆ ಯಾರು ಹೊಡೆದರು ? ಚಿ...ತುಂಟಾ, ಎಂದು ಮುದ್ದಾದ ಮಾತುಗಳಿಂದ ಮಾತನಾಡಿಸುತ್ತಾ ಅವನ ನಗುವಿನಲ್ಲಿ ಎಲ್ಲಿಲ್ಲದ ಉಲ್ಲಾಸ ಕಳೆದಂತೆಲ್ಲಾ ಈ ಪಾಪನ ಪಡೆದ ನಾನೇ ಧನ್ಯಳು ಎಂದು ಮನಸ್ಸಿನಲ್ಲಿ ಭಾವಿಸಿಕೊಳ್ಳುತ್ತಾಳೆ.

ಪುಟ್ಟಾ, ದೊಡ್ಡವನಾಗಿದ್ದಿಯಾ ? ಪಾಪನ ಇವತ್ತು ಶಾಲೆಗೆ ಸೇರಿಸಬೇಕು ಅಲ್ವೇನೋ ? ಪಾಪು ಹೂಂ, ಹೂಂ... ಎಂದು ಓಡುವನು, ಶಾಲೆಗೆ ಹೊರಡುವಾಗ ಅಮ್ಮನ ಎರಡು ಕೆನ್ನೆಗಳಿಗೆ ಸಿಹಿ ಮುತ್ತನ್ನು ಕೊಟ್ಟು ಅಮ್ಮಾ ಟಾ...ಟ .. ಎನ್ನುತ್ತಾ ಕೈಬೀಸುವನು.

ದಿನ ಕಳೆದಂತೆ, ಅಮ್ಮಾ ಇವತ್ತು ಶಾಲೆಯಲ್ಲಿ ನನಗೇ ಗುಡ್ ಎಂದರು, ಮತ್ತೆ ನನಗೆ ಸ್ವೀಟ್ ಕೊಟ್ಟು ನನ್ನ ಮಿಸ್ ತುಂಬಾ ಜಾಣ ಅಂದರು. ಚೆನ್ನಾಗಿ ಕಲಿಯಬೇಕು ಎಂದು ಶಾಲೆಯ ವಿವರಣೆಯನ್ನು ಅಮ್ಮನಲ್ಲಿ ಹೇಳುವನು ಅಮ್ಮನಿಗೆ ನಮ್ಮ ಪುಟ್ಟ ಒಳ್ಳೆಯ ನಡತೆಯ ಸ್ವಭಾವದವನಾಗುವ ಭರವಸೆಯಿಂದ ಅವನು ಇಷ್ಟ ಪಟ್ಟ ತಿಂಡಿ ಮಾಡಿಕೊಡುವುದು ಜೊತೆಗೆ ವಸ್ತುಗಳನ್ನು ತೆಗೆದು ಕೊಡುವಳು. ಅಮ್ಮನಾದವಳು ಎಲ್ಲಾ ರೀತಿಯಲ್ಲಿ ಕಷ್ಟವನ್ನು ಅರಿಯದೆ ಕೇಳಿದಂತೆ ಒದಗಿಸಿ ಕೊಡುವಳು. ಸಂತೋಷದಿ ಕಾಲ ಕಳೆಯುತ್ತಾ ಪುಟ್ಟ ಹೈಸ್ಕೂಲ್ ಓದುತ್ತಿದ್ದ. ಅಮ್ಮನಿಗೆ ಮಾತ್ರ ಅವನು ಯಾವಾಗಲೂ ಪುಟ್ಟನಾಗಿಯೇ ಇರುತ್ತಿದ್ದ. ಅವನ ಹೆಸರು ರಾಮು. ಅಮ್ಮ ಅವನನ್ನು ಪ್ರೀತಿಯಿಂದ ಪುಟ್ಟ ಎಂದು ಕರೆಯುವುದು ವಾಡಿಕೆಯಾಗಿತ್ತು. ಪುಟ್ಟ ದಿನ ಕಳೆದಂತೆ ಶ್ರೀಮಂತ ಮಕ್ಕಳ ಸ್ನೇಹವಾಯಿತು ಅವರ ಆಟ, ತಿನ್ನುವ ತಿಂಡಿ, ತಿನಿಸುಗಳ ಅವರು ಹಾಕುವ ಉಡುಪುಗಳು ಇವನನ್ನು ಅಣಕಿಸುವಂತಿತ್ತು. ನಾನು ಅದರಂತೆ ಉಡುಪು ಹಾಕಿಕೊಂಡರೆ ಹೇಗೆ? ಎಂದು ತನ್ನ ಪ್ರತಿ ಬಿಂಬವನ್ನು ಕನಸಿನ ಉಡುಪುಗಳನ್ನು ಹಾಕುತ್ತಾ ಗಂಟೆಗಟ್ಟಲೆ ಕನ್ನಡಿಯ ಮುಂದೆ ಚಿತ್ರಗೀತೆಯ ಹಾಡನ್ನು ಗೊಣಗುತ್ತಾ ತಲೆ ಬಾಚಿಕೊಳ್ಳುತ್ತಿದ್ದನು. ಪರವಾಗಿಲ್ಲ ನಾನು ಒಳ್ಳೆ ಹೀರೊ, ತರ ಕಾಣುತ್ತೀನಿ ಎಂದು ಮನಸ್ಸಿನಲ್ಲಿ ಭಾವಿಸಿ ಕೊಂಡು ತೃಪ್ತಿ ಪಡುತ್ತಿದ್ದನು.

ಏನು ? ಇವತ್ತು ಬಹಳ ಖುಷಿಯಾಗಿದ್ದಿಯಾ ? ಏನೋ ಒಂದು ಬದಲಾವಣೆ ಕಾಣುತಲ್ಲಾ ? ಎಂದು ಅಮ್ಮ ಕೇಳುವಾಗ ಎದೆ ದಸಕ್ಕೆಂದಿತ್ತು. ಅಮ್ಮನಿಗೆ ನನ್ನ ಮನಸ್ಸಿನಲ್ಲಿರುವುದು ಗೊತ್ತಾಯಿತಾ ? ಇರಲಿ.

ಅಮ್ಮಾ...ಅಮ್ಮಾ...ನನಗೆ ಇವತ್ತು ಒಳ್ಳೆ ರೆಡಿಮೆಡ್ ಬಟ್ಟೆ ತೆಗೆದು ಕೊಡುತ್ತಿಯಾ ? ಎಲ್ಲಾ ಸ್ನೇಹಿತರು ಒಳ್ಳೆ ಒಳ್ಳೆಯ ಬಟ್ಟೆ ಹಾಕುವಾಗ ನನ್ನನ್ನು ಎಲ್ಲರೂ ತಿರಸ್ಕಾರದಿಂದ ನೋಡುತ್ತಾರೆ. ನನಗೆ ಈವಾಗಲೇ ಬೇಕು, ಎಂದು ಹಟ ಹಿಡಿಯುತ್ತಾನೆ. ಅವನು ಕೇಳುವುದರಲ್ಲಿ ತಪ್ಪು ಇಲ್ಲದಿದ್ದರೂ ಅವನಿಗೆ ಆಸೆ, ಆಕಾಂಕ್ಷೆಗಳು ಇರುತ್ತೆ ಎಂದು ಭಾವಿಸಿ, ಕೊಡಿಸೋಣ ಅದಕ್ಕೇನಂತೆ, ಎಂದಾಗ ಈವಾಗಲೇ ಬೇಕು ಎಂದು ಹಟ ಹಿಡಿಯುತ್ತಾನೆ. ಅಮ್ಮನಿಗೆ ತುಂಬಾ ದುಃಖವಾಯ್ತು. ಅಮ್ಮನಲ್ಲಿ ಕಾಸು ಇಲ್ಲದ್ದು ಪುಟ್ಟನಿಗೆ ಹೇಗೆ ತಿಳಿಯಬೇಕು, ನಾಳೆ ತೆಗೆದುಕೊಡುವೆನು. ನೀನು ಈವಾಗ ಶಾಲೆಗೆ ಹೋಗು ಎಂದು ಸಮಾಧಾನ ಮಾಡಿ ಶಾಲೆಗೆ ಕಳುಹಿಸುವಳು. ಅವನ ಮನಸ್ಸು ಯಾಕೆ ಹೀಗಾಯ್ತು, ಒಳ್ಳೆ ನಡತೆಯಿದ್ದ ಇವನಿಗೆ ಇಂತಹ ದುರ್ಬುದ್ಧಿ ! ಎಲ್ಲಾ ದೇವರ ಕೃಪೆ, ಮಾರನೇ ದಿನ ಅಮ್ಮ ಹೊಸ ಡ್ರಸ್ ತೆಗೆದುಕೊಡುವಳು ಎಂಬ ಹಂಬಲದಿಂದ ಬೇಗ ಎದ್ದು ಸ್ನಾನಮಾಡಿ, ತಿಂಡಿ ತಿಂದು ಶಾಲೆಗೆ ಹೋಗುವವನು. ಸಾಯಂಕಾಲ ಬಂದ ಪುಟ್ಟ. ತನ್ನ ಶ್ರೀಮಂತ ಸ್ನೇಹಿತರ ಜೊತೆ ತನ್ನ ಡ್ರಸ್ ತೋರಿಸಲು ಕರೆ ತರುವನು. ಆದರೆ ಅಮ್ಮ ಡ್ರಸ್ ತೆಗೆದಿರಲಿಲ್ಲ. ಹಣದ ಕೊರತೆಯಿಂದ ಅಮ್ಮ ಸ್ವಲ್ಪ ಹಣ ಕೂಡಿಟ್ಟಿದ್ದಳು. ಆದರೆ ಆ ಹಣ

ಅವನ ಡ್ರೆಸ್‌ಗೆ ಸಾಕಾಗಿರಲಿಲ್ಲ. ಡ್ರೆಸ್ ಕೊಂಡುಕೊಳ್ಳಲು ಒಂದುನೂರು ರೂಪಾಯಿ ಬೇಕಾಗಿತ್ತು. ಅಷ್ಟು ಹಣ ಇಲ್ಲದ ಕಾರಣ ಬೇಸರವಾಗಿ ನಾಳೆ ಬರುತ್ತೇನೆ ಎಂದು ಹೇಳಿ ಮನೆಗೆ ಬಂದಿದ್ದಳು. ಅಮ್ಮನ ಕಷ್ಟ ಪುಟ್ಟನಿಗೆ ಹೇಗೆ ಗೊತ್ತಾಗಬೇಕು. ಸ್ನೇಹಿತರೊಡಗೂಡಿ ಬಂದ ಪುಟ್ಟನಿಗೆ 'ರಾಮು ಎಲ್ಲೋ ನಿನ್ನ ಡ್ರೆಸ್ ತೋರಿಸು' ಎಂದಾಗ ಅಮ್ಮಾ...ಅಮ್ಮಾ...ಎನ್ನುತ್ತ ನನ್ನ ಡ್ರೆಸ್ ತೋರಿಸು' ಎಂದು ಗೋಗರೆಯುತ್ತ ಕೇಳುವಾಗ ಹೆತ್ತಕರಳು ಚುರುಕೆಂದಿತು. ಸ್ನೇಹಿತರು ಬಂಡ್ರೋ ಇವನು ಎಲ್ಲಾ ಬುರುಡೆ ಬಿಡುತ್ತಾನೆ ? ಇವನಿಗೆ ನಮ್ಮ ಸ್ನೇಹ ಬೇಕು, ಒಳ್ಳೆ ಡ್ರೆಸ್ ಹಾಕಿಕೊಳ್ಳಕೆ ಆಗೋಲ್ಲ ಬಂಡ್ರೊ ಎಲ್ಲಾ ಹೋಗುವ' ಎಂದು ಎಲ್ಲರೂ ತೆರಳುವರು. ಪುಟ್ಟನಿಗೆ ಅಮ್ಮನ ಮೇಲೆ ತುಂಬಾ ಕೋಪ ಬಂತು. ಸ್ನೇಹಿತರ ಎದುರು ನನ್ನ ತಲೆ ತಗ್ಗಿಸುವಂತಾಯಿತಲ್ಲ ಎಂದು.

ಸಹನೆ ಮೀರಿ, ಅಮ್ಮಾ...ಅಮ್ಮಾ...ಎಂದು ಗಟ್ಟಿಯಾಗಿ ಕಿರುಚಿಕೊಳ್ಳುತ್ತಾ, ನನಗೆ ಇಷ್ಟವಾದುದನ್ನು ಕೊಡಿಸುವುದಕ್ಕೆ ಆಗದ ಮೇಲೆ ಯಾಕೆ ನನ್ನನ್ನು ಶಾಲೆಗೆ ಕಳುಹಿಸುತ್ತೀಯಾ ? ಶ್ರೀಮಂತರ ಮಕ್ಕಳೆಲ್ಲಾ ಬೈಕ್‌ನಲ್ಲಿ ಶಾಲೆಗೆ ಬರುತ್ತಾರೆ, ಹೊರಗಿನ ತಿಂಡಿಗಳನ್ನು ತಿನ್ನುತ್ತಾರೆ. ಅವರ ಮನೆಗಳಲ್ಲಿ ಟಿ. ವಿ. ಅಲ್ಲದೆ ಹೊರಗಿನ ಚಿತ್ರ ಮಂದಿರಗಳಲ್ಲಿ ಸಿನಿಮಾ ನೋಡುತ್ತಾರೆ. ಆ ಭಾಗ್ಯ ನನಗಿಲ್ಲವೇ, ಜಾಲಿ ಅಂದರೆ ಅದು, ನಾನಿದ್ದೀನಿ, ಹಾಕಿದ್ದ ಬಟ್ಟೆಯನ್ನು ಹಾಕಿಕೊಂಡು ತಿಂದ ತಿಂಡಿಯನ್ನೇ ತಿಂದುಕೊಂಡು ಇದ್ದೀನಿ' ಎಂದು ಹೇಳುವಾಗ ಅಮ್ಮ ಧರ್ಮ ಸಂಕಟದಲ್ಲಿ ಸಿಲುಕಿದಳು. ಇಂತಹ ಮಾತುಗಳನ್ನು ಹೇಳುವಂತನಾದನೇ ಎಂದು ಅಮ್ಮನಿಗೆ ದುಃಖವಾಯ್ತು. ಬೆಳೆದು ನಿಂತ ಮಗನನ್ನು ಈವಾಗಲೂ ಪುಟ್ಟ ಎಂದು ಕರೆದಾಗ ನನಗೆ ಪುಟ್ಟಪಾಪನೇ ಎಂದು ಅನಿಸಿತು. ಆದರೆ ಇಂದು ಅವನ ಬಾಯಿಂದ ಇಂತಹ ಮಾತುಗಳು ಹೊರ ಬಂದಿದ್ದವು.

ತನ್ನ ಭಾವನೆಗಳನ್ನು ಬದಿಗಿಟ್ಟು ಪುಟ್ಟನಿಗೆ ಹೇಗಾದರೂ ಮಾಡಿ ಒಳ್ಳೆ ಡ್ರೆಸ್ ತೆಗೆದು ಕೊಡಬೇಕೆಂದು, ಪುಟ್ಟ ಶಾಲೆಗೆ ಹೋದ ಮೇಲೆ ಮನೆಕೆಲಸಕ್ಕೆ ಹೋಗಿ ಬರುತ್ತಿದ್ದಳು. ಹಣವನ್ನು ಕೂಡಿಟ್ಟಳು. ಆ ಹಣವನ್ನು 'ಪುಟ್ಟಾ' ನೀನೇ ಇಷ್ಟವಾದ ಡ್ರೆಸ್ ತೆಗೆದುಕೊಂಡು ಬಾ ಎಂದು ಅವನನ್ನು ಜವಳಿ ಅಂಗಡಿಗೆ ಕಳುಹಿಸಿದಳು. ಅಸ್ವಸ್ಥಳಾದ ಅಮ್ಮನು ಔಷಧಿ ಕೂಡ ತೆಗೆದುಕೊಳ್ಳದೆ ಮಗನಿಗೆ ಎಲ್ಲಾ ಹಣ ಕೊಟ್ಟಿದ್ದಳು. ಹಣ ಕೊಂಡುಹೋದ ಪುಟ್ಟನು ಒಳ್ಳೆ ಡ್ರೆಸ್ ತೆಗೆದುಕೊಂಡು ತನ್ನ ಸ್ನೇಹಿತರಿಗೆ ತೋರಿಸಲು ಮುಂದಾಗುವನು...ಅಮ್ಮಾ... ಎಂದು ಕೂಗುತ್ತಾ ಮನೆ ಒಳಗೆ ಸ್ನೇಹಿತರ ಜೊತೆ ಬರುವನು. ಅವರನ್ನು ಕುಳ್ಳಿರಿಸಿ ಒಳಗೆ ಹೋದ ಪುಟ್ಟನಿಗೆ ಆಶ್ಚರ್ಯವು ಕಾದಿತ್ತು. ಅವಳು ಮೂರ್ಛೆ ಹೋಗಿ ಬಿದ್ದಿದ್ದಳು. ಅವಳು ತನ್ನ ಮಗನಿಗಾಗಿ ತನ್ನ ದೇಹವನ್ನೇ ತೇಯ್ದು ಚಿರ ನಿದ್ದೆಯಲ್ಲಿ ಮಲಗಿದ್ದಳು. ಪುಟ್ಟನಿಗೆ ಹೇಗೆ ಗೊತ್ತಾಗಬೇಕು. ಅಮ್ಮ... ಅಮ್ಮ...ಎಂದು ಕರೆದಾಗ, ಬಾರದ ಅಮ್ಮನಿಗಾಗಿ ಚಡಪಡಿಸುವನು. ಅವನ ಸ್ಥಿತಿಯನ್ನು ಕಂಡ ಸ್ನೇಹಿತರು ನಿನ್ನ ಅಮ್ಮ ಸತ್ತು ಹೋಗಿದ್ದಾಳೆ ಎಂದಾಗ ಅಮ್ಮಾ...ಎಂದು ಗೋಳಾಡುವನು...

—ಆಜಡ್ಕ ರಾಣಿ ಬಾಲಕೃಷ್ಣ,
ಕುಶಾಲನಗರ.

---

## ಕೊಡಗು

ಬಂಗಾರ ಬಿತ್ತಿಹುದು, ಶ್ರೀಗಂಧ ಬೆಳೆದಿಹುದು
ಸಿಂಧೂರದ ಸಿಂಗಾರಕೆ ಎಣೆಯು ಎಲ್ಲಿ...?
ಮಂಜು ಹರಡಿಹುದಿಲ್ಲಿ ಮಲ್ಲಿಗೆಯು ಚೆಲ್ಲಿಹುದು
ಕಾವೇರಿ ಮಾಟಕ್ಕೆ ಸಾಟಿ ಎಲ್ಲಿ...?

ಕಾಫಿ, ಕಿತ್ತಳೆಯಿಲ್ಲಿ, ತೆಂಗು ಕಂಗುಗಳಲ್ಲಿ
ಭೂದೇವಿ ನೋಟಕ್ಕೆ ಎಡೆಯು ಇಲ್ಲಿ
ವೀರ ಯೋಧರು ಇಲ್ಲಿ, ನೀರೆ ವನಿತೆಯರಿಲ್ಲಿ
ಕನ್ನಡದ ಮಣ್ಣಿಗೆ ಕೀರ್ತಿ ಇಲ್ಲಿ.

ಮಳೆರಾಯ ಬರುತಿಹನು, ಹೊಳೆರಾಯ ಹರಿದಿಹನು
ವೀರ ಈ ಧರತಿಗೆ ಕಂಪು ಚೆಲ್ಲಿ
ಚಳಿರಾಯ ಬಂದಿಹನು, ಚಂದಿರನು ನಗುತಿಹನು
ಯುಗಗಳ ಜೋಡಿಗೆ ಮಂದಹಾಸ ಚೆಲ್ಲಿ.

ಮೋಸ, ಕಪಟಗಳಿಲ್ಲ, ದ್ವೇಷ, ಮತ್ಸರವಿಲ್ಲ
ಏಕತೆಗೆ ಬೇರಾವ ನೆಲವು ಇಲ್ಲ
ನೂರು ಜಾತಿಗಳಿಲ್ಲಿ, ಜೋರು ಸಂಭ್ರಮವಿಲ್ಲಿ
ರೊಟ್ಟಿಯಾ ಊಟಕ್ಕೆ ತಟ್ಟೆ ಎಲ್ಲಿ ?

— ತೀರ್ಥ ಅರಂಬೂರು [ಚೆಂಬು] ಚೆನ್ನೈ.

---

: ಸೂಕ್ತಿ :

ನಾವು ನಮ್ಮ ಕಾರ್ಯಗಳನ್ನು ತೀರ್ಮಾನಿಸುತ್ತೇವೆ. ಅವು ನಮ್ಮ ಯೋಗ್ಯತೆಯನ್ನು ತೀರ್ಮಾನಿಸುತ್ತದೆ.

# ಆರೋಗ್ಯ ಚಿಂತನ :

## ಬಿಳಿ ಹೋಗುವಿಕೆ [ಬಿಳಿಸ್ರಾವ, ಬಿಳುಪು]

ಹೆಂಗಸರ ಕಾಯಿಲೆಗಳಲ್ಲಿ ಬಿಳಿಸ್ರಾವ ಒಂದು ಅತ್ಯಂತ ಸಾಮಾನ್ಯವಾದ ತೊಂದರೆಯಾಗಿದೆ. ಹೆಣ್ಣು ಬಿಳುಪು ಹೋಗುತ್ತಿದ್ದಲ್ಲಿ ಕೆಲವೊಮ್ಮೆ ಅನಾವಶ್ಯಕವಾಗಿ ಚಿಂತೆಗೆ ಈಡಾಗುತ್ತಾಳೆ. ತನಗೆ ಯಾವುದೋ ದೊಡ್ಡ ಕಾಯಿಲೆ ಇದೆ ಎಂದು ಮಾನಸಿಕವಾಗಿ ಕೊರಗುತ್ತಾಳೆ. ಅವರಿವರ ಮಾತು ಕೇಳಿ ಇಲ್ಲ ಸಲ್ಲದ ನಾಟಿ ಔಷಧಗಳನ್ನು ಬಳಸಿ ಯಶಸ್ಸು ಕಾಣದೆ ಆತ್ಮವಿಶ್ವಾಸ ಕಳೆದುಕೊಳ್ಳುತ್ತಾಳೆ. ಇದರ ಬಗ್ಗೆ ಇಂದು ಇರುವ ಮೂಢ ನಂಬಿಕೆಗಳು ಹಾಗೂ ಸರಿಯಾದ ತಿಳುವಳಿಕೆಯ ಕೊರತೆ ಇದಕ್ಕೆ ಕಾರಣ. ಬಿಳುಪು ಒಂದು ಸರಳ ಸಮಸ್ಯೆಯಾಗಿದ್ದು, ಸರಿಯಾದ ಔಷಧಗಳನ್ನು ವೈದ್ಯರ ಸಲಹೆಯಂತೆ ಸೇವಿಸುವುದರಿಂದ ಇದನ್ನು ಪೂರ್ಣ ಗುಣಪಡಿಸಲು ಸಾಧ್ಯವಿದೆ ಎಂಬುದನ್ನು ಎಲ್ಲರೂ ಅರಿಯಬೇಕು.

ಎಲ್ಲಾ ಹೆಣ್ಣುಗಳಲ್ಲೂ ಸಾಮಾನ್ಯವಾಗಿ ಸ್ವಲ್ಪ ನಸು ಹಳದಿಯ ದ್ರವಾಂಶ ಯೋನಿಯ ಮೂಲಕ ಹೊರ ಹೋಗುತ್ತಿ

ಡಾ॥ ಎನ್. ಎಸ್. ಪ್ರವೀಣ. ಎಂ.ಡಿ., ಕೇರಳ

ರುತ್ತದೆ ಇದು ಯಾವುದೇ ರೋಗದ ಲಕ್ಷಣವಲ್ಲ ಎಂಬುದನ್ನು ಮೊದಲು ಅರಿಯಬೇಕು. ಗರ್ಭಕೋಶದ ಕತ್ತಿನ ಭಾಗದ ಗ್ರಂಥಿಗಳು ಯೋನಿ ತೇವವಾಗಿರಲೆಂದು ಸ್ವಾಭಾವಿಕವಾಗಿಯೇ ಲೋಳೆಯಂತಹ ದ್ರವಾಂಶ ಸ್ರವಿಸುತ್ತದೆ. ಹಾಗೆಯೆ ಮುಟ್ಟಿಗೆ ಮುಂಚೆ, ಲೈಂಗಿಕ ಉದ್ರೇಕದ ಸಮಯದಲ್ಲೂ, ಹೆಣ್ಣು ಗರ್ಭ ಧರಿಸಿದ ಸಂದರ್ಭಗಳಲ್ಲಿ ಬಿಳುಪು ಸ್ರಾವ ಹೆಚ್ಚಾಗುವುದು ಸಾಮಾನ್ಯ. ಇದಕ್ಕೆ ಭಯ ಬೇಕಾಗಿಲ್ಲ.

ಬಿಳುಪು ಜಾಸ್ತಿ ಹೋಗುತ್ತಿದ್ದಲ್ಲಿ, ವಾಸನೆಯಿಂದ ಕೂಡಿದ್ದಲ್ಲಿ ಅಥವಾ ಜೊತೆಗೆ ತುರಿಕೆ ಇದ್ದಲ್ಲಿ, ಬಿಳುಪಿನೊಂದಿಗೆ ರಕ್ತ ಸಹ ಹೋಗುತ್ತಿದ್ದಲ್ಲಿ, ಬಿಳುಪಿನೊಂದಿಗೆ ಕೆಳಭಾಗದ ಹೊಟ್ಟೆ ನೋವು, ಸೊಂಟ ನೋವು ಇದ್ದಲ್ಲಿ ಚಿಕಿತ್ಸೆ ಬೇಕಾಗುತ್ತದೆ.

**ಕಾರಣಗಳು :–** ಟ್ರೈಕೊಮೊನಾಸ್ (Trichomonas) ಎಂಬ ಸೋಂಕಾದಲ್ಲಿ ನೊರೆ ನೊರೆಯಾಗಿ ಬಿಳಿ ಮುಟ್ಟು ಕಾಣಿಸಿಕೊಂಡು, ತುರಿತ ಸಹ ಇರಬಹುದು. ಹಸಿರು–ಹಳದಿ ಮಿಶ್ರಿತ ಅಥವಾ ಬಿಳಿಯ ಕೆಟ್ಟ ವಾಸನೆಯ ತೆಳು ರಸ ಹೋಗಬಹುದು. ಕೆಲವೊಮ್ಮೆ ಜನನಾಂಗ ಬಾತಿದ್ದು ನೋಯುತ್ತಿರುತ್ತದೆ. ಮೆಟ್ರೋನಿಡಾಸೋಲ್ (Metronidazole) ಎಂಬ ಮಾತ್ರೆಯನ್ನು ಸೇವಿಸುವುದರಿಂದ ಇದನ್ನು ಪೂರ್ಣ ಗುಣಪಡಿಸಲು ಸಾಧ್ಯವಿದೆ. ಈ ಸೋಂಕಿದ್ದಲ್ಲಿ ಚಿಕಿತ್ಸೆಯನ್ನು ಗಂಡನಿಗೂ ನೀಡಬೇಕಾಗುತ್ತದೆ. ಏಕೆಂದರೆ ಗಂಡನಿಂದ ಸಹ ಸಂಭೋಗದ ಸಮಯದಲ್ಲಿ ಹೆಣ್ಣಿಗೆ ಈ ಸೋಂಕು ತಗಲಬಹುದು.

'ಕಾನ್ಡಿಡಾ' [Candida] ಎಂಬ ಬೂಸ್ಟ್ ಯೋನಿಯನ್ನು ಸೋಂಕುವುದರಿಂದ ಸಹ ಅತಿಯಾದ ಬಿಳುಪು ಸಾಮಾನ್ಯ. ಬಿಳಿ ಬಣ್ಣದ, ಗಟ್ಟಿಯಾದ ಮೊಸರಿನಂತಹ ದ್ರವ ಹೊರಬರುತ್ತಿರುತ್ತದೆ. ಜೊತೆಗೆ ತುರಿಕೆ ಸಹ ಇರುತ್ತದೆ. ಸಿಹಿಮೂತ್ರ ರೋಗಿಗಳಲ್ಲಿ ಇದು ಜಾಸ್ತಿ ಕಂಡುಬರುತ್ತದೆ. ಆದ್ದರಿಂದ ಆಗಾಗ ಈ ಸೋಂಕು ಕಾಣಿಸಿಕೊಳ್ಳುತ್ತಿದ್ದಲ್ಲಿ ಮೂತ್ರ ಪರೀಕ್ಷಿಸಿ ಸಿಹಿಮೂತ್ರ ರೋಗವಿದೆಯೇ ಎಂಬುದನ್ನು ತಿಳಿಯಬೇಕು. ಗರ್ಭಿಣಿಯರಲ್ಲಿ, ಜೀವರೋಧಕ ಮಾತ್ರೆ, ಜನನ ನಿಯಂತ್ರಣ ಮಾತ್ರೆ ನುಂಗುವವರಲ್ಲಿ ಸಹ ಇದು ಜಾಸ್ತಿ ಕಂಡುಬರುತ್ತದೆ. ವೈದ್ಯರ ಸಲಹೆಯಂತೆ ಯೋನಿ ಗುಳಿಗೆಯನ್ನು ಬಳಸುವುದರಿಂದ ಇದನ್ನು ಸಂಪೂರ್ಣ ಗುಣಪಡಿಸಬಹುದು. ಮನೆಯಲ್ಲಿ ನಡೆಯುವ ಹೆರಿಗೆ, ನಾಟಿ ಔಷಧ ಮಾಡುವವರ ಬಳಿ ಗರ್ಭಪಾತ ಮಾಡಿಸಿಕೊಳ್ಳುವಿಕೆ ಇತ್ಯಾದಿಯಿಂದ ಗರ್ಭಕೋಶಕ್ಕೆ ಸೋಂಕುತಗಲಿ ಬಿಳಿಸ್ರಾವವಾಗಬಹುದು. ಗರ್ಭಕೋಶಕ್ಕೆ ತಗಲುವ ಕೆಲವೊಂದು ಸೋಂಕುಗಳು, ಲೈಂಗಿಕ ಕಾಯಿಲೆಗಳು ಸಹ ಬಿಳಿಸ್ರಾವಕ್ಕೆ ಕಾರಣವಿರಬಹುದು.

ಬಿಳಿಸ್ರಾವದೊಂದಿಗೆ ರಕ್ತವೂ ಇದ್ದು, ಹೊಲಸು ವಾಸನೆಯಿಂದ ನೀರಿನಂಥ ಕಂದುಬಣ್ಣದ ಸೆರಗು, ಅತಿಯಾದ ರಕ್ತಸ್ರಾವವಾಗುತ್ತಿದ್ದಲ್ಲಿ, ಅನಿಯಮಿತ ಮುಟ್ಟಾಗುವಿಕೆ, ಕೆಳಹೊಟ್ಟೆಯಲ್ಲಿ ಗೆಡ್ಡೆ ಇತ್ಯಾದಿ ಇದ್ದಲ್ಲಿ ಅದು ಗರ್ಭಕೋಶದ ಗೆಡ್ಡೆ, ಕ್ಯಾನ್ಸರ್‌ಗೆ ಸಂಬಂಧಿಸಿದುದಿರಬಹುದು.

**ಚಿಕಿತ್ಸೆ :–** ಮುಖ್ಯವಾಗಿ ಬಿಳುಪು ಹೋಗುತ್ತಿರುವ ಹೆಣ್ಣಿಗೆ ಮಾನಸಿಕ ಧೈರ್ಯ ಮುಖ್ಯವಾದದ್ದು. ಕೆಲವೊಮ್ಮೆ ಸಹಜವಾಗಿ [ಯಾವುದೇ ಕಾಯಿಲೆ ಇಲ್ಲದೆಯೇ] ಆಗುತ್ತಿರುವ ಬಿಳಿಸ್ರಾವಕ್ಕೆ ಅನಗತ್ಯವಾಗಿ ಹೆದರಿ, ಕೊರಗುವುದೆಷ್ಟು ಸಮಂಜಸ !

ಜಾಸ್ತಿ ಬಿಳುಪು ಹೋಗುತ್ತಿದ್ದು, ಅದು ಕಾಯಿಲೆಗೆ ಸಂಬಂಧಿಸಿದುದೇ ಆಗಿದ್ದರೂ ಅದಕ್ಕೆ ಸರಳ ಪರಿಣಾಮಕಾರಿಯಾದ ಚಿಕಿತ್ಸೆಯಿದ್ದರೂ, ನಾಚಿಕೆಯಿಂದ ವೈದ್ಯರ ಬಳಿ ಹೋಗದೆ ಇಲ್ಲಸಲ್ಲದ ನಾಟಿ ಔಷಧ ಮಾಡಿ, ಮಾಟ ಮಂತ್ರ

[9ನೇ ಪುಟ ನೋಡಿ]

# ಗೌಡರ ವಿವಾಹ ಪದ್ಧತಿಯ ಸೋಭಾನೆಗಳು

[ಹಿಂದಿನ ಂಚಿಕೆಯಿಂದ]

## 13. ಬಾಗಿಲು ತಡೆಯುವ ಹಾಡು :

ಅ] ಅಂದು ಗೋಕುಲದಿಂದ ನಾರಾಯಣ ಶ್ರೀಕೃಷ್ಣ ಮಂಟಪದ ನಡುಗಾಗಿ ಬರುವ ಹಾಗೆ ॥ ಮಂಟಪದ ನಡುಗಾಗಿ ಬರುವ ಹಾಗೇನಣ್ಣಯ್ಯ ಮಡದಿ ಬಿಡುಗೊಂಡು ಬರುತ್ತಾರೆ. ಮಡದಿ ಬಿಡುಗೆಂಡು ಬರುವಾಗ ಅಣ್ಣಯ್ಯ, ತಂಗಿಯ ಕದಗಾಳ ತಡೆದಾಳು ॥ ತಂಗಿಯು ಕದಗಾಳ ತಡೆದಾಳು ತಂಗ್ಯಮ್ಮ ನೀ ತಡೆದ ಕದವಾ ಬಿಡು ಬೇಗ ನಾ ತಡೆದ ಕದವಾ ಬಿಡುವಲ್ಲೆ ಪ್ರತಿಯೊಂದು ಮಾತು ನುಡಿ ಬೇಗ ॥ ದೇಶ ಉಂಬಳಿ ಕೊಡುವೆ॥ ಶೇಷ ಉಪ್ಪರಿಕೆ ಕೊಡುಗೆ ನೀ ಬಿಡು ಬೇಗ । ದೇಶ ಉಂಬಳಿ ನನಗುಂಟು ಶೇಷ ಉಪ್ಪರಿಕೆ ನನಗುಂಟು । ಎನ್ನುವ ನೀ ನನಗೆ ಕೊಡುವೆನಮ್ಮ ॥ ಪ್ರೀತಿಗೊಂದು ಮಾತು ನುಡಿ ಬೇಗ ॥

ಇ] ಅಂಗನ ಮಣಿಯೇ । ರಂಗ ಬಂದೇ ಬಿಡಿರಾ ಬಾಗಿಲ ತೆಗೆಯಿರಿ ಕದಗಳಾ । ರಂಗ ರುಕ್ಮಿಣಿ ಬಂದಗಾಯಿತು । ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ ॥ ತಂದೆ ತಾಯಿಯರ ಯರ ನಾ ಬಿಟ್ಟು ಬಂದೆ । ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ ॥ಅಂಗನ॥ ಅಣ್ಣ ತಮ್ಮಂದಿಯರ ಆಟ ಬಿಟ್ಟು ನಾ ಬಂದೆ । ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ ॥ಅಂಗನ॥ ಅಕ್ಕ ತಂಗಿಯರ ಕೂಟು ಬಿಟ್ಟು ನಾ ಬಂದೆ । ಬಿಡಿರಿ ಬಾಗಿಲ ತೆಗೆಯರಿ ಕದಗಳಾ ॥ಅಂಗನ॥ ಅತ್ತೆ ಮಾವರ ಗುಣ ಕಂಡು ನಾ ಬಂದೆ । ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ ॥ ಬಾವ ಮೈದುನರ ಆಟ ನಾ ಕಂಡುಬಂದೆ । ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ । ಅತ್ತಿಗೆ ನಾದಿನಿಯರ ಹಿತಾ ಕಂಡು ನಾ ಬಂದೆ । ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ ॥ ಅಂಗನ ಮಣಿಯೇ ರಂಗ ಬಂದೇ । ರಂಗಾ ಬಂದಗಾಯಿತು ಬಿಡಿರಿ ಬಾಗಿಲ ತೆಗೆಯಿರಿ ಕದಗಳಾ ॥

## 14) ಹೆಣ್ಣು ವಹಿಸಿ ಕೊಡುವ ಹಾಡು :

ಎಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು । ನಿಮ್ಮ ಮಡಿಲೊಳಗಿಡಲು । ತಂದಿರುವೆವೂ ॥ ೧ ॥ ಕೊಳ್ಳಿರೀ ಮಗುವನ್ನು ಎಮ್ಮ ಮನೆ ಬೆಳಕನ್ನು । ನಿಮ್ಮ ಮನೆಯನು ತುಂಬಲೊಪ್ಪಿಸುವೆವೂ ॥ ೨ ॥ ಮರೆಮೋಸ ಕೊಂಕುಗಳನರಿಯಳಿವಳು । ಇನಿತು ವಿಶ್ವಾಸವನು ಕಂಡರಿಯಳಿವಳೂ ॥ ೩ ॥ ಕಷ್ಟಗಳ ಸಹಿಸದೆಯೆ ಕಾಣದೆಯೆ ಬೆಳೆದವಳು । ಸಲಹಿಕೊಳ್ಳಿರಿ ಮಗುವನೊಪ್ಪಿಸುವೆವೂ ॥ ೪ ॥ ಕಠಿಣಗಳ ನೆಳಲ್ ಸುಳಿಯಲು ದುರಿ ಬಾಡುವಳು । ಹಿರಿಮಂಜು ಬಳಲಿಸಿದ ಹೂವಿನಂತೆ ॥ ೫ ॥ ಸುಖದಲ್ಲಿ ದುಃಖದಲ್ಲಿ, ಯೆಲ್ಲದೆಸಯಿರವಿನಲಿ । ನಿಮ್ಮ ಪಾಲಿಗೆ ನಿಲುವ ಕುವರಿಯಿವಳೂ ॥ ೬ ॥ ನಿಮಗಿವಳು ನೀಡುತಿಹ ಹಾಲು ಹಣ್ಣುಗಳು ಸವಿ । ಎಂದೆಂದೂ ಇವಳ ನಡೆ ನಿಮ್ಮ ಪರವಾಗಿ ॥ ೭ ॥ ನಿಮ್ಮ ಕೀರುತಿ ಬೆಳೆಯಲಿವಳ ಸೌಜನ್ಯದಲಿ । ನಿಮ್ಮ ಕುಲಶೀಲಗಳು ಪರಿಮಳಿಸಲೀ ॥ ೮ ॥ ನಿನ್ನ ಮಡದಿಯ ಕೊಂಡು ಸುಖವಾಗಿರು ಮಗುವೇ । ನಿಮ್ಮ ಸೊಸೆ ಸೋದರಿಯು ಕೊಳ್ಳಿರಿವಳಾ ॥ ೯ ॥ ಜೀವನದ ಸಾಗರದಿ ಸಂಸಾರ ನೌಕೆಯನು । ಅಥರಿಪ ಹುಟ್ಟನಂತಿಹ ಜೀವಿಯಿವಳೂ ॥ ೧೦ ॥ ಕೈ ಬಿಡದೆ ಕಾವುದೈ ಪ್ರೇಮದಿಂದನು ದಿನವು । ಇಂದಿನಿಂದೆಂದಿಗೂ ನಿಮ್ಮವಳು ಮುಂದೆ ॥ ೧೧ ॥ ಅತ್ತೆ ಮಾವಂದಿರನು ತಾಯ್ತಂದೆಯೆಂದರಿತು। ನಿತ್ಯ ನಿರ್ಮಲೆಯಾಗಿ ಸೇವೆಯನು ಮಾಡು ॥ ೧೨ ॥ ಪತಿಯೇ ದೇವರು ನಿನಗೆ, ಬೇರೆ ದೇವರು ಇಲ್ಲ । ಪತಿಯೇ ಗತಿ ನಿನಗೆ ಪತಿಯೇ ಸರ್ವಸ್ವವೂ ॥ ೧೩ ॥ ಪಾದಸೇವೆಯ ಮಾಡು ದಾಸಿಯಂತಿರು ನೀನು । ಪತಿಯ ಗೃಹಕೃತ್ಯದೊಳು ಮಂತ್ರಿ ನೀನವಗೆ ॥ ೧೪ ॥ ಉಣಿಸುಗಳನೀಯಲಾತನ ಮಾತೆಯೇ ನೀನು । ಪ್ರೀತಿಯಿಂದೊಡಗೂಡಿ ಸಂತಸದಿ ಬಾಳೂ ॥ ೧೫ ॥ ಹೆತ್ತವರ ಮನೆಗಿಂದು ಹೊರಗಾದೆ ನೀಮಗಳೆ । ಆ ಮನೆಯೇ ಅವರೇ ನಿನ್ನವರು ಮುಂದೆ ॥ ೧೬ ॥ ಅವರೇ ತಾಯ್ಗಳು ಸುಖರು ಭಾಗ್ಯವನು ಬೆಳೆಸುನವರು । ಅವರೇ ದೇವರು ನಿನ್ನ ದೇವರುಗಳೂ ॥ ೧೭ ॥ ಆವ ಬಳುವಳಿ ಕೊಡಲಿ ಮಗಳೆ ನಾ ನಿನಗೆ । ಆವ ವಸ್ತುವ ನಿತ್ತು ಕಳುಹಿಸಲೀ ಮನೆಗೆ ॥ ೧೮ ॥ ಮಾವನಾ ಮನೆಗಿಂದು ತೆರಳುವಾ ಮಗಳೆ । ದೇವರಿತ್ತಿಹ ವಸ್ತು ವಾಹನವ ಕೂಡಲೀ ॥ ೧೯ ॥ ಬಡತನದಿ ಬೆಂದು ಬಡವಾಗಿರುತಿರ್ದು । ಕಡು ಮಮತೆಯಲಿ ನಿನ್ನ ಸಾಕಿ ಸಲಹಿದೆನು ॥ ೨೦ ॥ ಅಡಿಗಡಿಗೆ ಬರುತಿರ್ದ ತೊಡರುಗಳ ಸಹಿಸಿ । ಬಡತನದ ಕಡಲಿನಲಿ ದಡ ಸೇರದಿರ್ದ ॥ ೨೧ ॥ ಮಗಳೇ ನಾನೇನು ಕೊಡಲಿ ನಿನಗೆ । ಹೋಗುವಾಗ ಅಗಲಿಕೆಯ ಉಪದೇಶ ನಿನಗೆ ॥ ೨೨ ॥ ಪತಿಗೆ ಸತಿಯೆಂಬ ಹಿತವಚನವನು । ಮತಿಯುತಳೇ ನೀ ನಡೆಸುತ್ತ ಬಾಳೇ ॥ ೨೩ ॥ ಪತಿಯ ಮಾತನು ಅಲ್ಲಗಳೆಯದಿರು ನೀನು । ಪತಿಯೇ ಪರದೈವವೆಂದು ನಂಬು ವಧುವೇ ॥ ೨೪ ॥ ನಿಲ್ ಕಣ್ಣೊರಸಿಕೊಳ್ ಮುದ್ದು ನೀನಳದಿರು । ತಾಯಿರಾ ತಂದೆಯಿರಾ ಪಡೆವಳಾ ॥ ೨೫ ॥ ಎರಡು ಮನೆಗಳ ಹೆಸರು ಖ್ಯಾತಿಗಳು ಉಳಿವಂತೆ । ತುಂಬಿದಾಯುಷ್ಯದಲಿ ಬಾಳಿ ಬದುಕು ನೀ ಮಗಳೇ ॥ ೨೬ ॥

[ಮುಂದುವರೆಯುವುದು]

# ಕಾನೂನಿನ ಕೆಲವು ತತ್ವಗಳು

1. ಒಬ್ಬನ ವೈಯಕ್ತಿಕ ಹಕ್ಕುಗಳು ಅವನ ಮರಣದೊಂದಿಗೆ ನಾಶವಾಗುತ್ತವೆ.

2. ತನಗೆ ಹಿತಾಸಕ್ತಿಯಿರುವ ಮೊಕದ್ದಮೆಯಲ್ಲಿ ಒಬ್ಬ ವ್ಯಕ್ತಿ ತಾನೇ ನ್ಯಾಯಾಧೀಶನಾಗುವಂತಿಲ್ಲ.

3. ತಾನು ನ್ಯಾಯಾಧೀಶನಾಗಿರುವ ಮೊಕದ್ದಮೆಯೊಂದರಲ್ಲಿ ತಾನೇ ಸಾಕ್ಷಿದಾರನಾಗುವಂತಿಲ್ಲ.

4. ಕಾನೂನುಬದ್ಧ ಹಕ್ಕಿನ ಉಲ್ಲಂಘನೆಯಾಗದೆ ನಷ್ಟವುಂಟಾಗಿದ್ದರೆ ಅದಕ್ಕೆ ಪರಿಹಾರವಿಲ್ಲ.

5. ಕಾನೂನುಬದ್ಧ ಹಕ್ಕಿನ ಉಲ್ಲಂಘನೆಯಾಗಿದ್ದರೆ ನಷ್ಟ ಸಂಭವಿಸಿರದಿದ್ದರೂ ಪರಿಹಾರ ಪಡೆಯಲು ಸಾಧ್ಯ.

6. ಯಾವನೇ ವ್ಯಕ್ತಿಯನ್ನು ಅವನ ಮೇಲಿರುವ ಆರೋಪಗಳಿಗೆ ಉತ್ತರಿಸುವ ಅವಕಾಶ ನೀಡದೆ ಶಿಕ್ಷಿಸುವಂತಿಲ್ಲ.

7. ಹತ್ತು ಜನ ಅಪರಾಧಿಗಳು ಶಿಕ್ಷೆಯಿಂದ ತಪ್ಪಿಸಿಕೊಂಡರೂ ಚಿಂತೆಯಿಲ್ಲ. ಆದರೆ ಒಬ್ಬ ನಿರಪರಾಧಿಗೆ ಮಾತ್ರ ಶಿಕ್ಷೆಯಾಗಬಾರದು.

8. ಕಾನೂನಿನ ತಿಳುವಳಿಕೆಯಿರಲಿಲ್ಲ ಎಂಬ ವಾದವನ್ನು ಸ್ವೀಕರಿಸಲು ಸಾಧ್ಯವಿಲ್ಲ.

9. ಆರೋಪವನ್ನು ಸಾಬೀತುಪಡಿಸುವಾಗ ಜವಾಬ್ದಾರಿ ಆರೋಪ ಹೊರಿಸಿದವನ ಮೇಲಿರುತ್ತದೆ.

10. ಕಾನೂನುಗಳು ತನ್ನ ಹಕ್ಕಿನ ಕುರಿತು ಜಾಗೃತನಾಗಿರುವವನಿಗೆ ಸಹಾಯ ಮಾಡುತ್ತವೆಯೇ ಹೊರತು ಜಾಗೃತನಾಗಿರದವನಿಗಲ್ಲ.

11. ಒಂದು ಅಪರಾಧಕ್ಕಾಗಿ ಒಬ್ಬನನ್ನು ಎರಡು ಬಾರಿ ಶಿಕ್ಷಿಸುವಂತಿಲ್ಲ.

12. ಸೇವಕ ಸೇವೆಯ ಅವಧಿಯಲ್ಲಿರುವಾಗ ಮಾಡಿದ ತಪ್ಪುಗಳಿಗೆ ಮೂಲತಃ ಹೊಣೆಗಾರ.

13. ಘಟನೆಯ ಬಗ್ಗೆ ಇತರರಿಂದ ಕೇಳಿ ತಿಳಿದುಕೊಂಡ ಹತ್ತು ಜನ ಸಾಕ್ಷಿದಾರರಿಗಿಂತಲೂ ಘಟನೆಯನ್ನು ಪ್ರತ್ಯಕ್ಷ ನೋಡಿರುವ ಒಬ್ಬ ಸಾಕ್ಷಿದಾರ ಮೇಲು.

14. ಒಬ್ಬ ತಾನು ನೇರವಾಗಿ ಏನನ್ನು ಮಾಡಲು ಸಾಧ್ಯವಿಲ್ಲವೋ ಅದನ್ನು ಇನ್ನೊಬ್ಬರ ಮೂಲಕ ಮಾಡಿಸಲು ಸಾಧ್ಯವಿಲ್ಲ.

15. ಎಲ್ಲಿ ಹಕ್ಕು ಇದೆಯೋ ಅಲ್ಲಿ ಪರಿಹಾರವಿದೆ.

16. ಸಾಕ್ಷ್ಯದ ತೂಕ ಮುಖ್ಯವೇ ಹೊರತು ಸಂಖ್ಯೆಯಲ್ಲ.

17. ಜಾಮೀನು ಸಾಮಾನ್ಯ ನಿಯಮವೇ ಹೊರತು ಜೈಲು ಅಲ್ಲ.

18. 'ಮಾನ್ಯತೆ ಇರುವ ವಿವಾಹ' ಎಂಬ ಊಹೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಬೇಕೇ ಹೊರತು 'ಮಾನ್ಯತೆ ಇಲ್ಲದ ವಿವಾಹ' ಎಂಬ ಊಹೆಗಲ್ಲ.

19. ಸಾರ್ವಜನಿಕ ಹಿತಾಸಕ್ತಿಗೆ ಮನ್ನಣೆ ನೀಡುವುದೇ ಅತೀ ಪ್ರಮುಖ ಕಾನೂನು.

20. ತನ್ನ ಮೇಲೆ ತಾನೇ ಆರೋಪ ಹೊರಿಸಿಕೊಳ್ಳುವಂತೆ ಒಬ್ಬನನ್ನು ಒತ್ತಾಯಿಸಲು ಸಾಧ್ಯವಿಲ್ಲ.

—**ಬಿ. ಕೆ. ಶ್ರೀಧರ** ಬಿ.ಎ. ಲಾ, ಎಲ್‌ಎಲ್.ಬಿ.

ಪುತ್ತೂರು.

## ಆರೋಗ್ಯ ಚಿಂತನ

[7ನೇ ಪುಟದಿಂದ]

ಮಾಡಿ, ಹರಕೆ ಹೊತ್ತು, ಕೊರಗಿ ತಮ್ಮ ಆರೋಗ್ಯವನ್ನು ಇನ್ನಷ್ಟು ಹದಗೆಡಿಸಿಕೊಳ್ಳುವುದು ಇನ್ನೊಂದು ವಿಪರ್ಯಾಸ.

ಯಾವುದೇ ನಾಚಿಕೆಯಿಲ್ಲದೆ ತಜ್ಞವೈದ್ಯರ ಬಳಿ ಹೋಗಿ ಅವರ ಸಲಹೆಯಂತೆ ಯೋನಿಗುಳಿಗೆ, ಜೀವರೋಧಕ ಔಷಧ ಬಳಸುವುದರಿಂದ ಬಿಳಿಸ್ರಾವವನ್ನು ಗುಣಪಡಿಸಬಹುದಾಗಿದೆ.

ಕೆಲವೊಮ್ಮೆ ಗರ್ಭಕೋಶಕ್ಕೆ ಸಂಬಂಧಿಸಿದ ಇತರ ಕಾಯಿಲೆಗಳಿವೆಯೆ ಎಂಬುದನ್ನು ತಿಳಿಯಲು ಕೆಲವೊಂದು ಪರೀಕ್ಷೆಗೆ ಒಳಪಡಬೇಕಾಗಬಹುದು. ಪ್ಯಾಪ್ ಸ್ಮೀಯರ್ [Pap smear], ಸ್ಕ್ಯಾನಿಂಗ್ ಇತ್ಯಾದಿ.

ಬಿಳಿಸ್ರಾವ ಔಷಧಗಳಿಂದಲೂ ಗುಣಕಾಣದಿದ್ದಲ್ಲಿ ವಿದ್ಯುತ್ ಕಾವಿನಿಂದ [ಕಾಟರಿ] ಅಥವಾ ಕ್ರೈಯೋ [Cryo] ಚಿಕಿತ್ಸೆಯಿಂದ ಗುಣಪಡಿಸಬೇಕಾಗಬಹುದು.

ಇದರಿಂದಲೂ ಶಮನವಾಗದಿದ್ದಲ್ಲಿ ಗರ್ಭಕೋಶದ ತೀವ್ರ ತರದ ಸೋಂಕಿದ್ದಲ್ಲಿ ಕೆಲವೊಮ್ಮೆ ಶಸ್ತ್ರಚಿಕಿತ್ಸೆಯ ಮೂಲಕ ಗರ್ಭಕೋಶವನ್ನೇ ತೆಗೆಯಬೇಕಾಗಬಹುದು.

ಒಟ್ಟಿನಲ್ಲಿ ಅತಿಯಾದ ಬಿಳುಪು ಹೋಗುತ್ತಿದ್ದಲ್ಲಿ ಚಿಂತೆ, ಗಾಬರಿ, ಅನಗತ್ಯ. ಇದೊಂದು ಸರಳ ಸಮಸ್ಯೆಯಾಗಿದ್ದು, ಸ್ತ್ರೀರೋಗ ತಜ್ಞರನ್ನು [Gynaecologist] ಕಂಡು ಅವರ ಸಲಹೆಗನುಗುಣವಾಗಿ ನಡೆದಲ್ಲಿ ಗುಣಮುಖರಾಗಲು ಸಾಧ್ಯವಿದೆ.

## ನಮ್ಮ ನಾಯಿ ಚಿಂಡ

ನಮ್ಮ ಮುದ್ದಿನ ಸಾಕು ಪ್ರಾಣಿಗಳಲ್ಲಿ ನಾಯಿಗೆ ಪ್ರಥಮ ಸ್ಥಾನ. ನಿಷ್ಠೆಗೆ ಹೆಸರಾದ ಪ್ರಾಣಿ ಇದು. ಒಂದೇ ಒಂದು ಬಾರಿ ಅನ್ನ ಕೊಟ್ಟವನನ್ನು ಅದು ಮರೆಯುವುದಿಲ್ಲ. ತನ್ನ ಯಜಮಾನ ಕಾಡಿನಲ್ಲಿ ಆಕಸ್ಮಿಕ ಸತ್ತಾಗ ಅನ್ನ, ಆಹಾರಗಳಿಲ್ಲದೆ 3 ತಿಂಗಳ ಕಾಲ ಕಳೇಬರಕ್ಕೆ ಕಾವಲು ನಿಂತ ನಾಯಿಯ ಕಥೆಯೊಂದು ಇಂಗ್ಲೀಷ್‌ನಲ್ಲಿದೆ.

ನಾಯಿಗೆ ಆ ಹೆಸರು ಬಂದ ಬಗ್ಗೆ ಒಂದು ಸ್ವಾರಸ್ಯಕರ ಕಥೆಯಿದೆ. ಸೃಷ್ಟಿಯ ಪ್ರಾರಂಭದಲ್ಲಿ ಬ್ರಹ್ಮನು ಬಗೆ ಬಗೆಯ ಜೀವರಾಶಿಗಳನ್ನು ಸೃಷ್ಟಿಸಿ ಅವುಗಳಿಗೆ ಬಗೆಬಗೆಯ ಹೆಸರುಗಳನ್ನು ಕೊಟ್ಟ. ಕೊನೆಗೆ ಸೃಷ್ಟಿಯಾದ ಈ ಪ್ರಾಣಿಗೆ ಹೆಸರು

**ಬೈತಡ್ಕ ಹೇಮ ಕುಂಜಪ್ಪ,** ಪುತ್ತೂರು.

ಬ್ರಹ್ಮನಿಗೆ ಹೊಳೆಯಲೇ ಇಲ್ಲ. ಆಗ ಅವನಿಗೆ ಸೃಷ್ಟಿಯನ್ನು ಕಾಪಾಡುವ ನಾರಾಯಣನ [ವಿಷ್ಣು] ಮತ್ತು ಲಯಾಧಿಕಾರಿ ಈಶ್ವರ [ಮಹೇಶ್ವರ]ನ ನೆನಪಾಯಿತು. ಅವರ ಹೆಸರುಗಳ ಮೊದಲ ಅಕ್ಷರಗಳಾದ 'ನಾ' ಮತ್ತು 'ಈ' ಗಳನ್ನು ಸೇರಿಸಿ 'ನಾಯಿ' ಎಂಬ ಹೆಸರು ಕೊಟ್ಟ. ಜೊತೆಗೆ ಮನುಷ್ಯನ ಅತ್ಯಂತ ಮುದ್ದಿನ ಸಾಕುಪ್ರಾಣಿಯಾಗಿರು ಎಂದು ಹರಸಿದನಂತೆ. ಕತೆ ಏನೇ ಇರಲಿ, ಇಂದು ಧನಿಕರ ಮನೆಗಳಲ್ಲಿರುವ ನಾಯಿಗಳ ಸ್ಥಾನಮಾನಗಳನ್ನು ಕಂಡರೆ ಬ್ರಹ್ಮನಿಗೇ ಆಶ್ಚರ್ಯವಾದೀತು.

ನಮ್ಮ ಅಪ್ಪ ನಾಯಿ ಸಾಕುವ ಗೀಳು ಹಚ್ಚಿಕೊಂಡಿದ್ದರು. ಅರಣ್ಯ ಇಲಾಖೆಯಲ್ಲಿ ನೌಕರರಾಗಿದ್ದ ಅವರು ಎಲ್ಲೆಲ್ಲಿಂದಲೋ ಸುಂದರವಾದ ನಾಯಿಮರಿಗಳನ್ನು ತರುತ್ತಿದ್ದರು. ತುಂಬ ಪ್ರೀತಿಯಿಂದ ಸಾಕುತ್ತಿದ್ದರು. ಮನೆಯಲ್ಲಿ ಊಟ ಮಾಡಿದ ದಿನಗಳಂದು ನಾಯಿಗೆ ಮೊದಲು ಒಂದು ತುತ್ತು ಹಾಕದೆ ಊಟ ಮಾಡಿದವರಲ್ಲ.

ಒಮ್ಮೆ ಅಪ್ಪ ಮನೆಯಲ್ಲಿರಲಿಲ್ಲ. ಆ ಸಮಯದಲ್ಲಿ ನಮ್ಮ ದಾಸು ನಾಯಿಗೆ ಏಕಾಏಕಿ ಏನೋ ರೋಗ ಬಂದುಬಿಟ್ಟಿತು. ನಾವು ಅದರ ಕಡೆಗೆ ಅಷ್ಟು ಗಮನ ಹರಿಸಲಿಲ್ಲ. ಅಪ್ಪ ಮನೆಗೆ ಬರಲು ಇನ್ನೂ 3 ದಿನಗಳಿದ್ದವು ಅಪ್ಪ ಇದ್ದಿದ್ದರೆ ಕೂಡಲೇ ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತಿದ್ದರು. ಅಮ್ಮನಾಗಲಿ, ನಾವಾಗಲಿ ಅಂತಹ ಕೆಲಸಗಳ ಗೋಜಿಗೆ ಹೋಗುತ್ತಿರಲಿಲ್ಲ. ನಮ್ಮ ತಾತ್ಸಾರದಿಂದಾಗಿ ಎರಡೇ ದಿನದಲ್ಲಿ ದಾಸು ಸತ್ತುಹೋಯಿತು ನಮ್ಮ ತಾತ್ಸಾರವೇ ದಾಸುವಿನ ಸಾವಿಗೆ ಕಾರಣವೆಂದು ಅಪ್ಪ ನಮ್ಮೆಲ್ಲರ ಮೇಲೆ ತುಂಬ ರೇಗಾಡಿದರು.

ಮುಂದಿನವಾರ ಅಪ್ಪ ಮನೆಗೆ ಬಂದಾಗ ಕೈಯಲ್ಲೊಂದು ನಾಯಿಮರಿ ಇತ್ತು. ಅದನ್ನು ನೋಡಿ ನಮಗೆ ನಗು ತಡೆಯಲಾಗಲಿಲ್ಲ. ಸಣಕಲು ದೇಹದ ತುಂಬ ಸಣ್ಣ ಮರಿಯದು. ಮೈಮೇಲೆ ರೋಮವೇ ಇರಲಿಲ್ಲ. ಇದು ಬದುಕಬಹುದೇ ಎಂಬ ಸಂದೇಹ ಬರುತಿತ್ತು. ಅಮ್ಮ ಅದನ್ನು ನೋಡಿ ಇದೆಂತಹ ನಾಯಿ ಮರಿ. ತೆಗೆದು ಆ ಕಾವೇರಿ ನದಿಗೆ ಎಸೆಯಬಾರದೇ ? ಎಂದರು [ನಮ್ಮ ಮನೆಯ ಎದುರುಗಡೆ ಕಾವೇರಿ ನದಿ ಹರಿಯುತ್ತಿದೆ.] ಅಪ್ಪ ನಮ್ಮ ಪ್ರತಿಕೂಲ ಪ್ರತಿಕ್ರಿಯೆಗಳಿಗೆ ಕಿವಿಗೊಡಲಿಲ್ಲ. ''ಇದು ನನ್ನ ಸ್ನೇಹಿತ ಚಿಂಡನ್‌ನಾಯರ್ ಕೊಟ್ಟದ್ದು. ಒಳ್ಳೆಯ ಜಾತಿ ಮರಿ. ಅದರ ತಾಯಿ ಹೇಗಿದೆ ಗೊತ್ತಾ ? ಇನ್ನು 6 ತಿಂಗಳಲ್ಲಿ ಇದನ್ನು ನೋಡು'' ಎಂದರು. ''ಆರು ತಿಂಗಳಲ್ಲಿ ಮಣ್ಣಾಗಿರುತ್ತದೆ'' ಎನ್ನುತ್ತಾ ಅಮ್ಮ ಒಳಗೆ ಹೋದರು.

ಮನೆಗೆ ಬಂದ ನಾಯಿ ಮರಿಗೆ ಉಪಚಾರ ಶುರುವಾಯಿತು. ಸ್ನೇಹಿತನ ನೆನಪಿಗಾಗಿ ಅದಕ್ಕೆ 'ಚಿಂಡ' ಎಂದು ನಾಮಕರಣವಾಯಿತು. ಚಿಕ್ಕ ಮಗುವಿಗೆ ತರುವಂತೆ ಅಪ್ಪ ಬೇರೆ ಬೇರೆ ಬೇಬಿ ಫುಡ್ ತರುತ್ತಿದ್ದರು. ಅವುಗಳನ್ನು ಅಪ್ಪನ ಸೂಚನೆಯಂತೆ ಸಮಯಕ್ಕೆ ಸರಿಯಾಗಿ ಚಿಂಡನಿಗೆ ಕೊಡುವುದು ನನ್ನ ಕೆಲಸವಾಯಿತು. ಕೇವಲ 15ದೇ ದಿನಗಳಲ್ಲಿ ಎಲ್ಲರ ಗಮನ ಸೆಳೆಯುವಷ್ಟರಮಟ್ಟಿಗೆ ಚಿಂಡನ ಮೈಕೈ ತುಂಬಿಕೊಂಡಿತು. 4 ತಿಂಗಳುಗಳು ಕಳೆದಾಗ ಅದರ ಮೈತುಂಬ ಉದ್ದನೆಯ ಬಿಳಿಯ ಕೂದಲು [ಜೂಲು] ಬೆಳೆದು ತುಂಬ ಸುಂದರವಾದ ನಾಯಿಯಾಯಿತು.

ಚಿಂಡ ನಮ್ಮ ಅಜ್ಜಿಯ [ತಂದೆಯ ತಾಯಿ] ಅಚ್ಚುಮೆಚ್ಚಿನ ಗೆಳೆಯನಾದ. ಚಿಂಡನ ಜವಾಬ್ದಾರಿ ನನ್ನಿಂದ ಅಜ್ಜಿಗೆ ವರ್ಗಾಯಿಸಲ್ಪಟ್ಟಿತ್ತು. ಉದ್ದನೆಯ ಕೂದಲಿನಿಂದ ಅದರ ಕಣ್ಣಿಗೆ ಮರೆಯಾಗದಂತೆ ಆಗಾಗ ಕತ್ತರಿಸುತ್ತಿದ್ದರು. ಅದರ ಬೆನ್ನಮೇಲಿನ ಕೂದಲನ್ನು ದಿನವೂ ಬಾಚಣಿಗೆಯಿಂದ ತಲೆ ಬಾಚಿದಂತೆ ಬಾಚಿ ಇಡುತ್ತಿದ್ದರು. ಎರಡು ದಿನಕ್ಕೊಮ್ಮೆ ಕಾವೇರಿ ನದಿಯಲ್ಲಿ ಸೋಪು ಹಚ್ಚಿ ಸ್ನಾನ ಮಾಡಿಸುತ್ತಿದ್ದರು.

ಚಿಂಡನು ಸುಮ್ಮನಿರುತ್ತಿರಲಿಲ್ಲ. ನಮ್ಮಲ್ಲಿ ತುಂಬ ಒಳ್ಳೆಯ ಜಾತಿಯ ಕೋಳಿಗಳಿದ್ದವು. ಬೇಸಿಗೆಯಲ್ಲಿ ಮೇಯಲು ಅವುಗಳು ಗದ್ದೆಗೆ ಹೋಗುತ್ತಿದ್ದವು. ಚಿಂಡ ಜೊತೆಯಲ್ಲಿ ಹೋಗಿ ಏರಿ ಮೇಲೆ ಕುಳಿತು ಕಾವಲು ಕಾಯುತ್ತಿತ್ತು. ಮುಂಗುಸಿ, ನರಿ, ಗಿಡುಗಗಳಿಂದ ಈಗ ಕೋಳಿಗಳಿಗೆ ಭಯವಿರಲಿಲ್ಲ. "ಚಿಂಡ ಸಾಕು ಬಾ" ಎಂದು ಕರೆದರೆ ಕೋಳಿಗಳನ್ನು ಮನೆಯ ಕಡೆಗೆ ಓಡಿಸಿಕೊಂಡು ಬರುತ್ತಿತ್ತು. ಕೋಳಿಗಳಿಗೂ ಇದು ರೂಢಿಯಾಗಿತ್ತು. ಬೇಸಿಗೆಯಲ್ಲಿ ನದಿಯ ಹೊಂಡಗಳಿಗೆ

ಡೈನಾಮೈಟ್ [ತೋಟ] ಎಸೆದು ಮೀನು ಹಿಡಿಯುತ್ತಿದ್ದೆವು. ಆಗ ಚಿಂಡ ಆಳಕ್ಕೆ ಮುಳುಗಿ ತಳದಲ್ಲಿದ್ದ ಸತ್ತ ಮೀನುಗಳನ್ನು ಕಚ್ಚಿ ತಂದು ದಡಕ್ಕೆ ಹಾಕುತ್ತಿತ್ತು. ಅಪ್ಪನಿಗೆ ಚಿಂಡನ ಬಗ್ಗೆ ಎಲ್ಲಿಲ್ಲದ ಹೆಮ್ಮೆ.

ಸುಮಾರು 3 ವರ್ಷ ಕಳೆದಿತ್ತು. ಒಂದು ದಿನ ಚಿಂಡನ ನಡವಳಿಕೆಯಲ್ಲಿ ವ್ಯತ್ಯಾಸ ಕಂಡುಬಂದಿತು. ಅನ್ನ ತಿನ್ನಲಿಲ್ಲ. ಹಾಲು ಕುಡಿಯಲಿಲ್ಲ. ಕಣ್ಣುಗಳು ಕೆಂಪಾಗಿದ್ದವು. ಮುಖ ಜೋಲು ಬಿದ್ದಿತ್ತು. ನಮ್ಮ ಮಾತುಗಳಿಗೆ ಎಂದಿನಂತೆ ಪ್ರತಿಕ್ರಿಯಿಸಲಿಲ್ಲ. ಹುಚ್ಚುಹಿಡಿದಿರುವ ಲಕ್ಷಣಗಳು ಕಂಡವು. ಅದನ್ನು ಗೂಡಿನಲ್ಲಿಯೇ ಇಟ್ಟು ಅಪ್ಪನನ್ನು ಆಫೀಸಿನಿಂದ ಕರೆ ತಂದೆವು.

ಅಪ್ಪ ಚಿಂಡನನ್ನು ದೂರದಿಂದ ಪರೀಕ್ಷಿಸಿದರು. ಮತ್ತೆ ಗೂಡಿನ ಹತ್ತಿರ ಬಂದು ಪರೀಕ್ಷಿಸುವಾಗ ಹೇಗೋ ಗೂಡಿನ ಬಾಗಿಲು ತೆಗೆದುಹೋಯಿತು. ಮತ್ತೆ ಮುಚ್ಚುವುದರೊಳಗೆ ಅದು ಗೂಡಿನಿಂದ ಹೊರಕ್ಕೆ ಹಾರಿ ಒಂದೇ ಸಮನೆ ಓಡತೊಡಗಿತು. ನಮ್ಮಿಂದ ಏನೂ ಮಾಡಲಾಗಲಿಲ್ಲ. ಹೀಗೆ ಓಡಿದ ಚಿಂಡ ಸುಮಾರು 2 ಫರ್ಲಾಂಗ್ ದೂರದಲ್ಲಿದ್ದ ನಮ್ಮ ನೆರೆ ಮನೆಗೆ ಹೋಗಿ ಅವರ ನಾಯಿಗೆ, ಹಂದಿಗಳಿಗೆ ಕಚ್ಚತೊಡಗಿತು. ಚಿಂಡನಿಗೆ ಹುಚ್ಚಿಡಿದಿರುವುದು ಖಂಡಿತವೆಂದುಕೊಂಡ ಅವರು ಅದಕ್ಕೆ ಗುಂಡುಹೊಡೆದು ಕೊಂದಿದ್ದರು.

ಸುದ್ಧಿ ತಿಳಿದು ನಾವೆಲ್ಲ ಅಲ್ಲಿಗೆ ಹೋದೆವು. ನಮ್ಮಜ್ಜಿ ಸತ್ತ ಚಿಂಡನನ್ನು ಕಂಡು ಆಪ್ತರೊಬ್ಬರು ಸತ್ತಾಗ ಅಳುವಂತೆ ಜೋರಾಗಿ ಅಳತೊಡಗಿದರು. ಅದನ್ನು ಅಲ್ಲೇ ಹೂತುಹಾಕುವ ನಮ್ಮ ಮಾತಿಗೆ ಅವರು ಒಪ್ಪಲಿಲ್ಲ. ಒಂದು ದೊಡ್ಡ ಬುಟ್ಟಿಯಲ್ಲಿ ಹಾಕಿಸಿ ಮನೆಗೆ ತರಿಸಿದರು. ಒಳಗೆ ಹೋಗಿ ಪೆಟ್ಟಿಗೆಯಿಂದ ಒಂದು ಒಳ್ಳೆಯ ಸೀರೆಯನ್ನು ತಂದರು. [ಅದು ಅವರ ಧಾರೆ ಸೀರೆಯಂತೆ]. ತಾವೇ ಸ್ವತಃ ಆ ಸೀರೆಯನ್ನು ನೆಲದಲ್ಲಿ ಹಾಸಿ ಚಿಂಡನ ಕಳೇಬರವನ್ನು ಅದರಲ್ಲಿ ಇಡಿಸಿದರು. ಸೀರೆಯಿಂದ ಚೆನ್ನಾಗಿ ಸುತ್ತಿಸಿ ಮನೆಯ ಪಕ್ಕದ ತೋಟಕ್ಕೆ ತರಿಸಿದರು. ತೋಟದ ಒಂದು ಮೂಲೆಯನ್ನು ಅವರೇ ಆರಿಸಿ ಅಲ್ಲಿ ಹೊಂಡ ತೋಡಿಸಿ ಹೂತುಹಾಕಿಸಿದರು.

ಅಜ್ಜಿ ಸುಮಾರು ಒಂದು ವರ್ಷದವರೆಗೆ ಚಿಂಡನನ್ನು ಹೂತುಹಾಕಿದಲ್ಲಿಗೆ ಆಗಾಗ ಹೋಗಿ ಸ್ವಲ್ಪ ಹೊತ್ತು ಇದ್ದು ಬರುತ್ತಿದ್ದರು. ಹುಚ್ಚು ಹಿಡಿದಿದ್ದರೂ ನಮಗಾರಿಗೂ ತೊಂದರೆ ಮಾಡದೆ ದೂರ ಹೋಗಿ ಸಾವಿಗೀಡಾದ ನಮ್ಮ ಚಿಂಡನನ್ನು ಮರೆಯಲು ಸಾಧ್ಯವೇ? ●

## ಸಾಕ್ಷರತೆಯ ನುಡಿ ಮುತ್ತು

ಕಲಿಯಿರಿ...ಕಲಿಸಿರಿ
ವಿದ್ಯೆಯಿಲ್ಲದವನ ಬಾಳು ನಾಯಿಗಿಂತ ಕಡೆ
ಬೆಡಗು ಬಿನ್ನಾಣ ಸಾಕು ಅಕ್ಷರ ಕಲಿಯಬೇಕು
ಸಹಿಯೊಂದೆ ಸಾಕಿಲ್ಲ ವ್ಯವಹಾರ ಸ್ಥಾನ ಬೇಕಲ್ಲ
ಇಂಪಾಗಿ ಹಾಡು ಹಾಡು ಸಾಕ್ಷರವಾಗಲಿ ನಮ್ಮ ನಾಡು
ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ
ಹೆಣ್ಣು ನಾಡಿನ ಕಣ್ಣು
ಕಲಿತವ ಕುಣಿದ ಕಲಿಯದವ ಧಣಿದ
ಅಕ್ಷರ ಕಲಿತವರ ಜೀವನ ಕಾವೇರಿ ಜಲದಷ್ಟೇ ಪಾವನ
ಕಲಿತ ಹೆಣ್ಣಿನ ಸದ್ಗುಣ ತಾಯಿನಾಡಿನ ಹೂಬನ
ಕಲಿಯುವ ಮೊದಲು ಒಕ್ಕಣ ಕಲಿತನಂತರ ಮುಕ್ಕಣ
ಹಳ್ಳಿಗೊಂದು ಅಂಗನವಾಡಿ ಅಕ್ಷರ ಕಲಿಸಿ ಚಂದವ ಮಾಡಿ
ಅಕ್ಷರವಿಲ್ಲದ ಬಾಳು ನಾಯಿಯಂತೆ ಗೋಳು
ಕಲಿಸಲು ಕಂಕಣ ಬದ್ಧ ಕಲಿಯಲು ನಾವು ಸಿದ್ಧ

1 2 3 ಸಾಕ್ಷರತೆಯ ಸಾರು
ಅಕ್ಷರ ಕಲಿಸಿ ಪರಿಸರ ಉಳಿಸಿ
ಸಾಕ್ಷರತ ಕುಟುಂಬ ಸುಖಿ ಕುಟುಂಬ
ಹೆಬ್ಬೆಟ್ಟಿನ ಸಹಿ ಅಳಿಸಿ ಅಕ್ಷರ ಸಹಿ ಉಳಿಸಿ
ಶಿಕ್ಷಣವೇ ಶಕ್ತಿ
ಓದು ಬರಹ ಕಲಿತ ನಾರಿ ಸುಖ ಸಂಸಾರಕ್ಕೆ ದಾರಿ
ಸಾಕ್ಷರತಾ ಗಿರಿ ಪ್ರಗತಿಯತ್ತಾ ಸಾಗಿರಿ
ಒಬ್ಬರಿಗೊಬ್ಬರು ಕಲಿಸಿ ದೀಪದಿಂದ ದೀಪ ಬೆಳಗಿಸಿ
ಓದು ಬರಹ ಲೆಕ್ಕ ತಿಳಿದವನ ಬಾಳು ಚೊಕ್ಕ
ಓದು ಬರಹ ಕಲಿತ ಜಾಣ ಊರಿಗೊಂದು ಆಭರಣ
ಅಕ್ಷರ ಸಂಪತ್ತು ಅಕ್ಷಯ ಸಂಪತ್ತು
ಸಾಕ್ಷರ ನಾರಿ ಪ್ರಗತಿಗೆ ದಾರಿ
ಅಕ್ಷರ ಕ್ರಾಂತಿ ದೇಶಕ್ಕೆ ಶಾಂತಿ
ಹೆಬ್ಬೆಟ್ಟಿನ ಸಹಿ ಬಾಳಿಗೆ ಕಹಿ
ಓದಲು ತಿಳಿ ಬದುಕಲು ಕಲಿ
ಪರಿಸರ ಸಂರಕ್ಷಣೆ ಎಲ್ಲರ ಹೊಣೆ
ಅಕ್ಷರ ಕಲಿಸು ಪರಿಸರ ಬೆಳೆಸು
ಸಾಕ್ಷರತೆ ಪಡೆಯಿರಿ ಮೌಢ್ಯತೆ ತೊರೆಯಿರಿ
ಹೆಂಡ ಸಾರಾಯಿ ಸಹವಾಸ ಹೆಂಡತಿ ಮಕ್ಕಳ ಉಪವಾಸ
ಶಿಕ್ಷಣದ ಮುನ್ನಡೆ ದೇಶದ ಮುನ್ನಡೆ

ಸಂಗ್ರಹ : ಕಡ್ಯದ ಧನು, ಅಮಂದೂರು.

**ಟೀಕೆ-ಟಿಪ್ಪಣಿ :**

# ಮೈಸೂರಿನಲ್ಲಿ ಮನೆ ಮನೆ ಹುತ್ತರಿ

**ಕೊ**ಡಗಿನ ಹುತ್ತರಿಯೆಂದರೆ ಕರ್ನಾಟಕದಾದ್ಯಂತ ಕನ್ನಡಿಗರಿಗೆ ಪರಿಚಿತವಾಗಿರುವ ಹಬ್ಬ. ಹುತ್ತರಿ ಹಬ್ಬವನ್ನು ಕೊಡಗಿನ ಜನತೆ ಬಹಳ ಶ್ರದ್ಧೆಯಿಂದ ತಮ್ಮ ಸಂಪ್ರದಾಯದಂತೆ ಆಚರಿಸಿ ಪಟಾಕಿ ಸಿಡಿಸಿ ಸಂತೋಷದಿಂದ ಕಳೆಯುವ ಒಂದು ಶುಭ ದಿನ. ಹುತ್ತರಿ ಬಗ್ಗೆ ಹೆಚ್ಚೇನೂ ಹೇಳಬೇಕಿಲ್ಲದಿದ್ದರೂ ಅನಿವಾರ್ಯವಾಗಿ ಒಂದೆರಡು ಮಾತುಗಳನ್ನು ನಮ್ಮ ಜನಾಂಗದ ದೃಷ್ಟಿಯಲ್ಲಿ ಬರೆಯಬೇಕೆಂದೆನಿಸುತ್ತದೆ.

ಜನಾಂಗವನ್ನು ಒಗ್ಗೂಡಿಸಲು ಸಮಾಜದವರೋ ಅಥವಾ ವಿದ್ಯಾಸಂಘದವರೋ ಹುತ್ತರಿ ಆಚರಣೆ ಬಗ್ಗೆ ಮೈಸೂರಿನ ಸ್ಥಳೀಯ ಪತ್ರಿಕೆಗಳಲ್ಲಿ ಸುದ್ದಿ ಪ್ರಚಾರ ಮಾಡಿ ಜನಾಂಗವನ್ನು ಸೇರಿಸಿ ಹುತ್ತರಿ ಹಬ್ಬ ಆಚರಿಸಲು ತೀರ್ಮಾನಿಸಿ, ಆಚರಿಸಲು ಬೇಕಾದ ಸಾಮಗ್ರಿಗಳನ್ನು ಸೇರಿಸಿದರು. ಹಬ್ಬವನ್ನು ಕೊಡಗು ಗೌಡ ವಿದ್ಯಾಸಂಘ ಶಾಖೆ ಮೈಸೂರು, ಇಲ್ಲಿ ಆಚರಿಸುವ ಬಗ್ಗೆ ಬೇರೆ ಪತ್ರಿಕೆಗಳಲ್ಲಿ ಓದಿದವರಿಗೆ ಮಾತ್ರ ತಿಳಿದಿರಬಹುದು. ಈ ಆಚರಣೆಯಲ್ಲಿ ಪಾಲ್ಗೊಳ್ಳಬೇಕೆಂದಿದ್ದವರು ಗೈರು ಹಾಜರಾದರು. ಇದಕ್ಕೆ ಕಾರಣವೇನಿರಬೇಕೆಂದು ತಿಳಿಯಲಿಚ್ಛಿಸಿದರೆ ಕೆಲವರು ಗೊತ್ತಿಲ್ಲ ಅಲ್ಲದೆ ಒಂದು ಕಾರ್ಡ್ ಹಾಕಿದ್ದರೆ ಇವರದೇನು ಗಂಟು ಕಮ್ಮಿಯಾಗುತ್ತಿತ್ತು ?

ಪಕ್ಕದ ಪರ ಸಮಾಜದಲ್ಲಿ ವಿಜೃಂಭಣೆಯಿಂದ ಹುತ್ತರಿ ಆಚರಿಸಿದರೆ, ನಮ್ಮ ವಿದ್ಯಾಸಂಘ ಕಟ್ಟಡದಲ್ಲಿ ಕೇವಲ ಬೆರಳೆಣಿಕೆಯ ಜನ ಸೇರಿ ಆಚರಿಸುವರು. ಇದನ್ನು ಹೇಗೆ ತಾನೆ ನೋಡಿ ಸಹಿಸಲು ಸಾಧ್ಯ? ಎದೆಗೆ ಚಾಕು ಹಾಕಿದ ಹಾಗೆ ಆಗುತ್ತದೆ ಎಂಬ ಅಭಿಪ್ರಾಯ ಜನರಿಂದ ತಿಳಿದುಬಂದಿದೆ. ಹಾಗಿದ್ದರೂ ಹುತ್ತರಿ ಆಚರಿಸಿಯೇ ತೀರಬೇಕೆಂದು ಕೆಲವರು ತೀರ್ಮಾನಿಸಿ ತಮ್ಮ ಸಂಬಂಧಿಕರನ್ನು ಕರೆದು ಒಂದು ಕಡೆ ಸೇರಿಸಿ ಹುತ್ತರಿ ಆಚರಿಸಲು ತೀರ್ಮಾನಿಸಿದರು. ಮೈಸೂರಿನಲ್ಲಿ ಈ ರೀತಿ ಹಲವಾರು ಮನೆಗಳಲ್ಲಿ ನೂರಾರು ಜನ ಸೇರಿ ವಿಭಿನ್ನ ರೀತಿಯಲ್ಲಿ ಒಂದೆಡೆ ಸಂಘಟಿತರಾಗದೆ ಆಚರಿಸಿದ ಬಗ್ಗೆ ವರದಿಯಾಗಿದೆ. ಇದು ನಿಜಕ್ಕೂ ವಿಷಾದನೀಯ.

ಈ ರೀತಿಯ ಹುತ್ತರಿ ಆಚರಣೆಗೆ ಮೈಸೂರಿನಲ್ಲಿ ಮೊಟ್ಟನ ಸುಬ್ಬಯ್ಯನವರ ಹಾಗೂ ಕೂಡಕಂಡಿರ ಗೋಪಾಲನವರ ಮನೆಯೇ ನಿದರ್ಶನ. ಮೊಟ್ಟನ ಸುಬ್ಬಯ್ಯನವರಲ್ಲಿ ಅವರ ಸಂಬಂಧಿಕರೆಲ್ಲಾ ಸೇರಿ ಆಚರಿಸಲು ಮುಂದಾಗಿ, 8 ಗಂಟೆಗೆ ಜೊತೆ ಸೇರಿ, ಅಲ್ಲಿಂದ ಕದಿರು ತರಲು ಕೂಡಕಂಡಿರ ಗೋಪಾಲನವರಲ್ಲಿಗೆ ದಿಬ್ಬಣವಾಗಿ ತೆರಳಿದರು. ಅವರ ಜೊತೆ ಸೇರಿ ನೆರೆಕಟ್ಟಿ, ಫಲಹಾರ ಮಾಡಿ, ಕದಿರು ಕೊಯ್ದು ಸಾವಿರಾರು ರೂಪಾಯಿಯ ಪಟಾಕಿ ಸಿಡಿಸಿ ಕುಣಿದು ಕುಪ್ಪಳಿಸಿದರು. ಆ ಸಮಯದಲ್ಲಿ ಕೆಲ ಹಿರಿಯರು ಸಮಾಜದಲ್ಲಿ ಆಗಿದ್ದರೆ ಚೆನ್ನಾಗಿರುತ್ತಿತ್ತು ? ಸಮಾಜದ ಗಣ್ಯರೆಂದು ಹೇಳಿಕೊಳ್ಳುವವರು ಯಾಕೆ ಹೀಗೆ ಮಾಡುತ್ತಾರೆ? ಇವರಿಗೇನು ಬಂತು ಗ್ರಹಚಾರ ಎಂದು ಕೇಳಿ ಬಂತು. ಈ ಎರಡು ಮನೆಯವರೆಲ್ಲಾ ಜೊತೆಗೂಡಿ ಹುತ್ತರಿ ಆಚರಿಸಲು ಸಾಕಷ್ಟು ನೆಂಟರಿಷ್ಟರು ಬೆಂಗಳೂರಿನಿಂದಲೂ ಬಂದು ಜೊತೆ ಸೇರಿ ಆಚರಿಸಿದ್ದು ನಿಜಕ್ಕೂ ಸಂತೋಷಕರವಾಗಿತ್ತು. ಇವರ ಮಿಲನವು ಒಂದು ಗೌಡ ಸಮಾಜದಂತೆ ಗೋಚರಿಸುತ್ತಿತ್ತು. ಇವರಿಗೆ ನನ್ನ ವೈಯಕ್ತಿಕ ಧನ್ಯವಾದಗಳು. ಈ ಮನೆಯವರು ನೆಂಟರಿಷ್ಟರನ್ನು ಒಂದೆಡೆ ಸೇರಿಸಿದ ಹಾಗೆ ಸಮಾಜದವರು ಅಥವಾ ವಿದ್ಯಾಸಂಘದವರು ಕನಿಷ್ಠ ಪ್ರಯತ್ನವನ್ನಾದರೂ ಏಕೆ ಮಾಡಿಲ್ಲ ? ಇವರಿಗೆ ಸಂಘಟನೆಯ ಶಕ್ತಿ ಇರುವುದಿಲ್ಲವೆ ? ಸಮಾಜದವರು ಅಥವಾ ವಿದ್ಯಾಸಂಘದವರೆಂದು ಹೇಳಿಕೊಳ್ಳುವ ನಿಷ್ಕ್ರಿಯ ಆಡಳಿತ ಮಂಡಳಿಯ ಕೆಲವರು ವಿದ್ಯಾಸಂಘದಲ್ಲಿ ಗೈರು ಹಾಜರಾಗಿದ್ದು ಬೇಜವಾಬ್ದಾರಿಯ ವರ್ತನೆ ಅಲ್ಲದೆ ಮತ್ತೇನು ? ಆಡಳಿತ ಮಂಡಳಿಯವರೇ ಗೈರು ಹಾಜರಾದಾಗ ಜನಾಂಗ ಯಾರನ್ನು ನಂಬಿ ವಿದ್ಯಾಸಂಘದಲ್ಲಿ ಬಂದು ಸ್ಪಂದಿಸಬೇಕು ? ಏಕಾಗಿ ? ಯಾರ ಹಿತಕ್ಕಾಗಿ ಸೇರಬೇಕು ? ಸಂಘಟಿತರಲ್ಲಿರುವ ಲೋಪದೋಷಗಳೇನು ? ಇನ್ನಾದರೂ ಸಮಾಜದವರು ಅಥವಾ ವಿದ್ಯಾಸಂಘದವರೆಂದು ಹೇಳಿಕೊಳ್ಳುವವರು ಕನಿಷ್ಠ ಪ್ರಯತ್ನವನ್ನು ಮುಂಬರುವ ವರ್ಷದಲ್ಲಿಯಾದರೂ ಜನಾಂಗದ ದೃಷ್ಟಿಯಿಂದ ಸಂಘಟನೆ ಮಾಡಲಿ. ಇಲ್ಲವಾದರೆ ಉತ್ಸಾಹಿ ನವ ಯುವಕರಿಗೆ ಬಿಟ್ಟು ಕೊಡುವುದು. ವೇಗವಾಗಿ ಚಲಿಸುತ್ತಿರುವ ಇಂದಿನ ಸಮಾಜದ ಹಿತದೃಷ್ಟಿಯಿಂದ ಕ್ಷೇಮಕರವಲ್ಲವೇ. ●

—ಕಡಿಯಪ್ಪನ ಕುಮಾರಜಯ, ಮೈಸೂರು.

---

**ವಿ. ಸೂ. :** ಈ ಬಗ್ಗೆ ಹಲವಾರು ಪತ್ರಗಳು ಸಂಗಾತಿ ಕಛೇರಿಗೆ ಬಂದಿದೆ. ಮೈಸೂರಿನಲ್ಲಿರುವ ಹತ್ತು ಕುಟುಂಬ ಹದಿನೆಂಟು ಗೋತ್ರದ ಸ್ವಜಾತಿ ಬಾಂಧವರು ಚಿಂತಿಸಿ, ಚರ್ಚಿಸಬೇಕಾದ ಬಹು ಮುಖ್ಯ ಅಂಶವೂ ಹೌದಾಗಿದೆ.

—ಸಂ.

## ಅಭಿನಂದನೆಗಳು



—ಕೆಂಜನ ಕೆ. ರಂಜು—

**1998-99**ನೇ ಸಾಲಿಗಾಗಿ ಮಂಗಳೂರು ವಿಶ್ವ ವಿದ್ಯಾನಿಲಯಕ್ಕೆ **"ಸೆನೆಟ್ ಪ್ರತಿನಿಧಿ"** ಯಾಗಿ ಆಯ್ಕೆಯಾಗಿರುವ ಹೊಸ್ಕೇರಿ ಗ್ರಾಮದ ಕೆಂಜನ ಶ್ರೀಮತಿ ಮತ್ತು ಶ್ರೀ **ಕೆಂಚಪ್ಪ** ಮತ್ತು **ಸರೋಜಿನಿ** ಇವರ ಪುತ್ರ ಕೆಂಜನ **ಕೆ. ರಂಜು** ಇವರು ಪ್ರಸಕ್ತ ಮಡಿಕೇರಿಯ ಫಿ॥ ಮಾ॥ ಕೆ. ಎಂ. ಕಾರ್ಯಪ್ಪ ಕಾಲೇಜಿನಲ್ಲಿ ಬಿಸಿನೆಸ್ ಮ್ಯಾನೇಜ್‌ಮೆಂಟ್ ಪದವಿಯ ಅಂತಿಮ ವರ್ಷದ ವಿದ್ಯಾರ್ಥಿಯಾಗಿದ್ದಾರೆ



## ನಗೆ ಹನಿಗಳು

○ ಇನ್‌ಸ್ಪೆಕ್ಟರ್ : ಆಕೆ ಗುಂಡು ಹೊಡೆದು ಗಂಡನನ್ನು ಕೊಂದಿದ್ದಾಳೆ.

ಅಧಿಕಾರಿ : ಹಾಗಾದರೆ ಅವನ ದೇಹದ ಮೇಲೆ ಪೌಡರಿನ ಗುರುತು ಇರಬೇಕಲ್ಲ.

ಇನ್‌ಸ್ಪೆಕ್ಟರ್ : ಅದು ಇದ್ದುದರಿಂದಲೇ ಆಕೆ ಅವನಿಗೆ ಗುಂಡು ಹಾಕಿದ್ದು.

○ ಗಂಡ ಹೆಂಡತಿ ಜಗಳವಾಡಿ ಸುಸ್ತಾಗಿದ್ದರು. ಬಾಗಿಲು ಸದ್ದಾಯಿತು. ಗಂಡನ ಬಂಧುವೊಬ್ಬರು ಬಂದಿದ್ದರು.

'ಇದ್ದಾರೆನಮ್ಮ ನಿನ್ನ ಗಂಡ ?' ಕೇಳಿದರು.

'ಹೂಂ! ಇನ್ನೂ ಇದ್ದಾರೆ! ಮಡದಿ ನಿಟ್ಟುಸಿರು ಬಿಟ್ಟಳು

—ಕೆ. ಎ. ಶಿವಪ್ಪ, ಗಾಳಿಬೀಡು.

# ನಿಮ್ಮ ಪತ್ರಗಳು

## ಶಕ್ತಿ ಬರಲಿ

ಮಾನ್ಯರೇ,

ಕೊಡಗು ಗೌಡ ಜನಾಂಗವನ್ನು ಒಟ್ಟುಗೂಡಿಸುವ ಸಂಗಾತಿಯ ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಕುಲದೇವರಾದ ಶ್ರೀ ವೆಂಕಟರಮಣ ಸ್ವಾಮಿ ಹಾಗೂ ಶ್ರೀ ಕಾವೇರಿ ಮಾತೆಯು ಕರುಣಿಸಲಿ. ಒಗ್ಗೂಡುವ ಶಕ್ತಿ ಜನಾಂಗಕ್ಕೆ ಬರಲಿ.

—ತೀರ್ಥ ಪ್ರಕಾಶ, ಎ. ಆರ್. ಚೆನ್ನೈ.

## ಮೋಸ ಇಲ್ಲೆ

ಮಾನ್ಯರೇ,

ಕೊಡಗು ಸಂಗಾತಿ ಲಾಯ್ಕ ಬರ್ತಾ ಉಟ್ಟು. ಇನ್ನೂ ಲಾಯ್ಕ ಬರ್ಲಿತ ನಾವೆಲ್ಲ ಸಹಾಯ ಮಾಡೊಕು. ವರ್ಷದ ಚಂದಾ ಸರಿಯಾಗಿ ಕೊಟ್ಟ್ ಪ್ರತಿ ಮನೆಗೆ ಒಂದೊಂದು ಪತ್ರಿಕೆ ತರ್ಸಿಕಣೊಕು.

ನಾನ್ ಒಂದ್ ಬೇಜಾರ ಸಂಗತಿ ಕೇಳ್ದೆ. ಬರ್ತಾ ಬರ್ತಾ ಕೊಡಗು ಸಂಗಾತಿ ಪತ್ರಿಕೆ ದುಡ್ಡು ಮಾಡಿಕೆ ಶುರು ಮಾಡ್ದೊಳಂತ ನಂಗೆ ಒಬ್ಬಿಬ್ಬರು ಹೇಳ್ದೊ. ಹಂಗೆ ಹೇಳ್ದವು ಯಾವ ಗ್ಯಾನಲಿ ಹೇಳ್ದೊಂತ ಗೊತ್ತ್ಲೆ. ಕುಸಿಯಾಗಿ ಅಥವಾ ಹೊಟ್ಟೆ ಕಿಚ್ಚಾಲ್. ನಾವು ಗ್ಯಾನ ಮಾಡ್ದೊ. ಇದರ್ಲಿ ಎಡ್ತ್ ಅರ್ಥ. ಒಂದ್ ಸತ್ಯ ಹಾದಿಲಿ ಕಷ್ಟಪಟ್ಟ್ ದುಡ್ಡು/ಲಾಭ ಮಾಡ್ದು. ಇನ್ನೊಂದು ಮೋಸ, ವಂಚನೆ ಮಾಡಿ. ಸಂಗಾತಿ ಕಷ್ಟ ಪಟ್ಟ್ ಒಳ್ಳೆ ವಿಷಯನ ಓದಿಕೆ ನಾವುಗೆಲ್ಲ ಮಾಡಿಕೊಟ್ಟೊಳೊ. ನಮ್ಮ ಬುದ್ಧಿ ಹೆಚ್ಚಾಗುವಂಗೆ ಹಾದಿ ತೋರ್ಸಿಯೊಳೊ. ಸಂಗಾತಿ ಇಷ್ಟ್ ಕೆಲ್ಸ ಮಾಡ್‌ಕನ ಸರಿಯಾದ ಲಾಭ ಬೇಕ್. ಎಂಥ ಕೆಲ್ಸ ಮಾಡ್ರೂ ಲಾಭ ಇಲ್ಲದೆ ಮನ್ಸಂಗೆ ಭೂಲೋಕಲಿ ಬದ್ಕಿಕೆ ಬೊತ್ತ್. ಹೀಂಗೆ ಸಂಗಾತಿ ಜನಿಗೆ ಸಹಾಯ ಮಾಡ್ತುಟ್ಟು.

ಸಂಗಾತಿ ಯಾರಿಗಾರ್ ಮೋಸ ಮಾಡ್ತುಟ್ಟಾ ? ನಂಗೆ ಗೊತ್ತಿದ್ದಂಗೆ ಇಲ್ಲೆ. ಚಂದಾ ಸರಿಯಾಗಿ ಕೊಟ್ಟವುಕೆ ತಪ್ಪದೆ ಪತ್ರಿಕೆ ಕಳ್‌ಸ್ತೊಳೊ. ಬೆವ್‌ರ್ ಸುರ್ಸಿ, ಕೆಲ್ಸ ಮಾಡಿ ಜನಕ್ಕೆ ಒಳ್ಳೆದಾಗಲಿತ ಮಾಡ್ತೊಳೋ ಹೊರ್ತ್, ಕಳ್ಳ ಕೆಲ್ಸ ಮಾಡಿ ದುಡ್ಡು ಮಾಡ್ದುಲೆಂತ ನಾನ್ ಖಡಿತಾ ಹೇಳ್ವೆ.

—ಪೂಜಾರಿ ಪೂವಯ್ಯ, ಬೆಂಗಳೂರು.

---

## ಹಿತ ನುಡಿ

ಗೂಬೆ ಹಗಲು ಕುರುಡು, ಕಾಗೆ ರಾತ್ರಿ ಕುರುಡು, ಆದರೆ ಅರೆಮನುಷ್ಯನೆಂಬ ಅರೆಪಿರಾಂದನು ಹಗಲಿರುಳು ಕುರುಡನೇ.

## ಜನಪ್ರಿಯವಾಗಲಿ

ಮಾನ್ಯರೇ,

ನಿಮ್ಮ ಪತ್ರಿಕೆಯ ಎಲ್ಲಾ ಸಂಚಿಕೆಗಳು ನಮ್ಮ ಕೈ ಸೇರುತ್ತಿವೆ. ಅದನ್ನು ಓದಿ ತುಂಬಾ ಸಂತೋಷಗೊಂಡೆ. ಗೌಡ ಜನಾಂಗಕ್ಕೆ ಮೀಸಲಾದ ಈ ಪತ್ರಿಕೆ "ಕೊಡಗು ಸಂಗಾತಿ"ಯ ಬದಲು "ಗೌಡ ಸಂಗಾತಿ" ಯೆಂದಿದ್ದರೆ ನಮ್ಮ ಗೌಡ ಬಾಂಧವರಿಗೆ ಇದನ್ನು ಗುರುತಿಸುವಲ್ಲಿ ಸುಲಭವಾಗುತ್ತಿತ್ತು.

ಅರೆಭಾಷಿಕ ವಿಭಾಗದಲ್ಲಿ ಮೂಡಿಬರುವ ಬಿ. ಆರ್. ಜೋಯಪ್ಪನವರ ಕಥೆಗಳನ್ನು ಓದಲು ತುಂಬಾ ಸ್ವಾರಸ್ಯವಾಗಿರುತ್ತದೆ. ಅರೆಭಾಷಿಕ ವಿಭಾಕ್ಕೆ ಹೆಚ್ಚಿನ ಪುಟಗಳನ್ನು ಮೀಸಲಿಡಿ.

—ಪೊನ್ನಚ್ಚನ ವಿನುತಾ ಕಾಳಪ್ಪ, ಮಡಿಕೇರಿ.

**ಟಿಪ್ಪಣಿ :** ನಿಮ್ಮ ಸಲಹೆ, ಸೂಚನೆ ಸ್ವಾಗತಾರ್ಹವೆ. ಆದರೆ ನಾವು ಪತ್ರಿಕೆಯ ಹೆಸರುಗಳನ್ನು ನಮ್ಮ ಇಷ್ಟದಂತೆ ಇಟ್ಟುಕೊಳ್ಳಲು ಆಗುವುದಿಲ್ಲ. ನಾವು ದೆಹಲಿಗೆ ಬರೆದು ಕಳುಹಿಸಿದ 10 ಹೆಸರುಗಳಲ್ಲಿ "ಗೌಡ ಸಂಗಾತಿ" ಎಂಬ ಹೆಸರು ಸಹ ಇತ್ತು. ಇದು ದೆಹಲಿಯಿಂದ ಮಾನ್ಯತೆ ಪಡೆದು ಅಲ್ಲಿಂದಲೇ ಸೂಚಿಸಿ ಬರುವಂತದ್ದು ಎಂದು ಈ ಮೂಲಕ ಜನತೆಗೆ ತಿಳಿಯಪಡಿಸುತ್ತೇನೆ.

—ಸಂ.

## ನಿಗಾ ತಕಣ್ಲೆ

ಮಾನ್ಯರೇ,

ಕೊಡಗು ಸಂಗಾತಿ ಪತ್ರಿಕೆಲಿ ಈ ಹಿಂದೆ ಪೂಜಾರಿ ಮೊಣ್ಣಪ್ಪನವು ಜನಾಂಗದ ನಮ್ಮ 'Gowda' ಅಕ್ಷರ ತಪ್ಪಿದರ್ಂದಾಗಿ ನಮ್ಮ ಜನಾಂಗದವ್ಕೆ ಕೇಂದ್ರ ಸರ್ಕಾರಲಿ ಕೆಲಸ ಸಿಕ್ತ್ ಇಲ್ಲೆತ ತಿಳಿಸಿದ್ದೊ. ಅದೇ ವಿಷಯನ ಈಗ ಪುನಃ ಚೆಟ್ಟಿಮಾಡ ಪ್ರಭಾ ಕಾರ್ಯಪ್ಪನವು ಪ್ರಸ್ತಾಪ ಮಾಡ್ಯೊಳೊ. ಪೂಜಾರಿ ಮೊಣ್ಣಪ್ಪನವು ಪತ್ರಿಕೆಲಿ ಪ್ರಕಟಿಸಿ ಯಾರೂ ಅದರ ಬಗ್ಗೆ ನಿಗಾ ತಕಣದಕ್ಕೆ ಪ್ರಭ ಕಾರ್ಯಪ್ಪನವು ಪ್ರಸ್ತಾಪ ಮಾಡ್ದ್ ಸಂತೋಷದ ವಿಷಯ. ಆದ್ದರ್ಂದ ಇನ್ನ್ ಮುಂದೆ ಆದರೂ ನಮ್ಮ ಗೌಡ ಜನಾಂಗದವೇ ಆದ ಇಬ್ಬರು ಹಾಲಿ ಶಾಸಕರ್, ಮತ್ತೆ ಮಾಜಿ ಮಂತ್ರಿಗ ಒಳೊ. ಅವು ಇನ್ನ್ ಮುಂದೆ ಇದರ ಬಗ್ಗೆ ನಿಗಾ ತಕಂಡವೇಂತ ನಾವು ನಂಬೋನೋ ಅಲಾ !

—ಕಡ್ಲೇರ ಸಂಜಿ ಮಂದಪ್ಪ, ಕುಯ್ಯಂಗೇರಿ.

## ಅರೆ ಭಾಷಿಕಾ ವಿಭಾಗ

### ಧಾರವಾಹಿ–18

**ಮೂಲಕಥೆ : ಅಶ್ವಥಿ ಅರವಿಂದ್**
**ಅರೆಭಾಷೆಗೆ : ಎಂ. ಇ. ಮಹಮ್ಮದ್**

# ಕರಿ ಚಿನ್ನ

ಮನೆಲಿ ಸೌದೆಗಾಗಿ ಪಾಪದ ಗೂಡೆಗ ಬಂದವೆ. ರಂಜನ್ ಹಣ ಕೊಟ್ಟ್ ಗೂಡೆಗಳ್ನ ಬಲೆಗೆ ಹಾಕಿಕಣ್ತಿತ್ತ್. ಹಣಕ್ಕೆ ಬಗ್ಗದ ಗೂಡೆಗ ಇದ್ದರೆ ಕೋವಿ ತೋರ್ಸಿ ಹೆದ್ರ್‌ಸ್ತಿತ್ತ್. ಹಂಗೆ ಬಲತ್ಕಾರ ಕೂಡ ಅಲ್ಲಿ ನಡೀತಿತ್ತ್. ಹಣನಂತನ ಮಜತ ಹೇಳಿ ಯಾರೂ ಪುಕಾರ್‌ಕೊಡಿಕೆ ಹೋತಿತ್‌ಲೆ. ಕೊಟ್ಟ್‌ರೂ ಪ್ರಯೋಜನ ಏನೂ ಆದ್‌ಲೇಂತ ಗೊತ್ತಿತ್ತ್. ಹಿಂದೆ ಒಮ್ಮೆ ಒಂದ್ ಗೂಡೆನ ಹಾಳ್‌ಮಾಡಿ ಪೊಲೀಸ್ ಪುಕಾರಾಗಿತ್ತ್. ಆದರೆ ಮೂರೇ ದಿನಲಿ ಆ ಗೂಡೆ ಕೊಲೆ ಆತ್ ಅದರ ಆರೋಪಿ ಇಂದೂ ಪತ್ತೆ ಆತ್‌ಲೆ.

ರಂಜನ್ ಇಂತ ಕೆಟ್ಟ ಕೆಲ್ಸಕೆ ಹೋಕಾಕನ ಯಾರ್‍ನಸ ಜೊತೆಲಿ ಕರ್ಕಂಡ್ ಹೋತಿತ್ತ್‌ಲೆ. ಅವನ ಈ ಗುಟ್ಟ್‌ನ ಕೆಲ್ಸ ಬೇರೆವುಕೆ ಗೊತ್ತಾಗಿಬುಟ್ಟದೇಂತ ಜೀಪ್‌ನ ಕೆಳಗೆ ಅಡಿಬರಿಲಿ ನಿಲ್ಸಿ ಅಂವ ಕೋವಿ ತಗಂಡ್ ಮಲೆಗೆ ಹೋತ್.

ಜೊತೆಗಾರರೊಟ್ಟಗೆ ಸೌದೆಗೆ ಬಂದ ಗಾಳಿಮರ ಸೋಮಯ್ಯನ ಮಗಳು ನೀಲು ಒಳ್ಳೆ ಪೊರ್ಲ್ ಇದ್ದಾರ್‌ಂದ ರಂಜನ್‌ನ ಕಣ್ಣ್ ಅವಳ ಮೇಲೆ ಬೀತ್. ಅಂವ ಕೈಭಾಸೆಲಿ ಅವಳ್ನ ಹತ್ರಕೆ ಕರ್ತ್. ಅವಳು ಅಂವನ ಹತ್ರಕೆ ಹೋತ್.

'ನೀ ಈಗ ಬಾರಿ ಪೊಲ್ಲಾಗಿ ಕಾಣ್ತಾ ಒಳ ಅಲ್ಲ ಗೂಡೆ'

ಅಂವ ಕಿರ್‌ನಗೆ ಬೀರಿ ಹೇಳ್ತ್. ನೀಲು ನಾಚಿಕೆಲಿ ತಲೆ ತಗ್ಗಿಸಿ ನಿಂತ್‌ಕಂಡತ್. ರಂಜನ್ ಕಣ್ಣ್‌ಲೇ ಅವಳ ಪೊರ್ಲ್‌ನ ನೋಡ್ಕಂಡ್ ನಿತ್ತತ್.

'ಫ್ಯಾರೆಸ್ಟ್ ಮಾದಯ್ಯನಂತವನೊಟ್ಟಗೆ ಮಾತ್ರ ನೀನ್ ಮಾತಾಡ್ದೂಂತ ಕಂಡದೆ ಅಲ್ಲನೆ ಗೂಡೆ ?'

'ನಾನ್ ಎಲ್ಲರೊಟ್ಟಗೂ ಮಾತಾಡ್ನೆ.' ಲೆಯಾ ?'

'ನಾ ಯಾಕೆ ಕೇಳೋಕು. ಒಮ್ಮೊಮ್ಮೆ ಪಾಪ ಮಾದಣ್ಣನೇ ಐದೋ ಹತ್ತೋ ಕೊಟ್ಟ್ ಹೋದೆ. ಅಣ್ಣನೂ ಈಗ ಜೈಲ್‌ಲಿ ಉಟ್ಟಲ್ಲ, ನೀವೆಲ್ಲ ಸೇರಿ ನನ್ನ ಮಣಿಯಣ್ಣನ ಜೈಲ್ ಸೇರೋಹಂಗೆ ಮಾಡ್ಯೊಳರಿ ಅಲ್ಲ.'

'ಮೋಸಾಂತ ಹೇಳ್ರೆ ಎಂತಾಂತ ಗೊತ್ತಿಲ್ಲದ ಚಂಗುಮಣಿನ ತಂಗೆ ನೀಲು ಬ್ಯಾಜರ್ಲಿ ಹೇಳ್ತಿತ್ತ್.

> ಕಳ್ದ ಸಂಚಿಕೆಲಿ............
>
> ರಂಜನ್‌ನ ಮೊದ್ವೆ ದಿನ ದೇವಯ್ಯ ತನ್ನ ಬಸ್‌ಗಳ್ನೆಲ್ಲಾ ಮೊದ್ವೆಗೆ ಬಂದವ್ಕೆ ಬುಡಿಕೆ ಸಾಲ್‌ಗಟ್ಟ್ ನಿಲ್ಸಿತ್ತ್. ಮೊದ್ವೆ ಕಳ್ದ್ ಫಸ್ಟ್ ನೈಟ್ ಸಹ ಆತ್. ಮಾರ್ನೆ ದಿನ ದೇವಯ್ಯ ಬ್ಯಾಂಕ್‌ಗೆ ಹೊರ್ಡ್ವಕನ ಗೌರ ವಾಲೆ, ಕರಿಮಣಿ, ತಾಳಿ, ಉಂಗುರ ಇಷ್ಟ್ ಬುಟ್ಟ್ ಬಾಕಿದ್ದ ಮಾಲ್‌ಗಳ್ನ ಬಿಚ್ಚಿ ದೇವಯ್ಯಂಗೆ ಕೊಟ್ಟತ್. ದೇವಯ್ಯಂಗೆ ಗೌರ ಹಿಂಗೆ ಮಾಡ್ದ್ ಮೊಕಕ್ಕೆ ಹೊಡ್ದಂಗಾತ್. ಅಪ್ಪೊತ್ತಿಗೆ ರಂಜನ್ ಕೋವಿ ತಕಂಡ್ ಮಲೆಗೆ ಹೊರ್ಟತ್.
>
> ಮುಂದೆ ಓದಿ............

'ಆ ಮಾದಯ್ಯ ಯಾಗಳೂ ನಿನ್ನ ಮನೆಗೆ ಬರ್ತಾ ಉಟ್ಟ್ ಗಡ ?'

'ಯಾಗಳೂ ಬಾ ಲೆ ಒಂದೊಂದ್ಸಲ ಮಾತ್ರ.'

'ಯಾಗ ನಿನ್ನ ಅಪ್ಪ ಮನೇಲಿ ಇರ್ವಕನ ಬಂದದೆ ಅಥ್ವ ಇಲ್ಲದಿರ್‌ಕನಾ ?'

'ಅಪ್ಪ ಇರ್‌ಕನ ಬಂದದೆ ಇಲ್ಲದಿರ್ಕನ ನಸ ಬಂದದೆ.'

'ಬಂದ್ ಎಂತ ಹೇಳ್ದೆ ?

'ನನ್ನೊಟ್ಟಗೆ ಎಂತನ ಹೇಳ್ದ ಪಪ್ಪನ ಕೇಳ್ದೆ, ಇಲ್ಲೇತ ಹೇಳ್ರೆ ಆಗಳೇ ಹೊರಟ್ ಹೋದೆ ಅಷ್ಟೆ.'

'ಮಾದಯ್ಯ ನೀವ್‌ಗೆ ದುಡ್ಡ್ ಏನೂ ಸಹಾಯ ಮಾಡ್‌ದುಲೆಯಾ ? ನೀನ್ ಅವನಕ್ಕಲೆ ದುಡ್ಡೊಂದೂ ಕೇಳ್‌ದು

'ನಿನ್ನ ಅಪ್ಪ ಮನೆಲಿ ಉಟ್ಟಾ ?'

'ಇಲ್ಲೆ, ಕೊಟ್ಟೂರ್‌ಗೆ ಒಂದ್ ಮೊದ್ವೆಗೆ ಹೋಗೊಳೊ.'

'ಬಂದ ಮೇಲೆ ನಾನ್ ಕೇಳ್ದೇಂತ ಹೇಳ್. ಏನಾದ್ರ್ ಹೆಲ್ಪ್ ಬೇಕಾದ್ರೆ ಮನೆಗೆ ಬಾಕೆ ಹೇಳ್.'

ಅಷ್ಟರ್ಲಿ ದೂರ್ದಂದ ನೀಲುನ ದೋಸ್ತ್‌ಗ ಅವಳ್ನ ಕರ್ದೊ.

'ನಾನ್ ಹೋನೆ'

ಹದ್ನಾರ್ ವಯಸ್‌ನ ನೀಲು ತನ್ನ ಜೊತೆಯವರ ಹತ್ರಕೆ ಓಡ್ತ್. ಅವಳ ತುಂಬಿದ ಎದೆ, ಒಮ್ಮೆ ಕೇಳ್ರೆ ಮತ್ತೊಮ್ಮೆ ಕೇಳೊಕೂಂತ ಆಸೆ ಆಗೊಂತ ಸ್ವರ, ರಂಜನ್‌ಗೆ ಆಸೆ ಹುಟ್ಟಿಬುಡ್ತ್.

ಇಲ್ಲೆ ಇಂತ ಫ್ರೆಶ್‌ಮಾಲ್‌ನ ಬುಟ್ಟರೆ

ಆದ್‌ಲೆ, ಸೆಕೆಂಡ್‌ಹ್ಯಾಂಡ್ ಆಕೆ ಮೊದ್ಲೆ ರುಚಿ ನೋಡೊಕು. ಅಣ್ಣ ಜೈಲ್‌ಲಿ ಉಟ್ಟ್. ಹೆದ್ರಿಕೆ ಏನೂ ಇಲ್ಲೆ. ಇನ್ನ್ ಇರ್‌ದು ಆ ಫ್ಯಾಕ್ಟ್ ಮಾದಯ್ಯ ಬೊಡ್ಡಿ ಮಜ. ಅದೊಂದ್ ಶನಿ, ಅವನೊಬ್ಬನ ಮುಗ್ಸಿಬುಟ್ರೆ ಮತ್ತೆ ಮರೀಸ್ ಇಲ್ಲೆ.

ತಲೆ ಮ್ಯಾಲೆ ಸೌದೆಹೊರೆ ಇರ್‌ಸ್ಕಂಡ್ ನಡ್‌ದ್ ಬಾತಿದ್ದ ನೀಲುನ ಕಣ್ಣ್‌ರೆಪ್ಪೆ ಮಿಟ್‌ಕ್ಸದೇ ನೋಡ್‌ತಾ ನಿಂತ್‌ಕಂಡತ್ ರಂಜನ್. ಗಾಳಿ ಮರ ಸೋಮಯ್ಯನ ಮಗಳು ಇಷ್ಟೊಂದು ಬ್ಯೂಟಿ ಕುಯಿನ್‌ಂತ ಅವಂಗೆ ಗೊತ್ತೆ ಇತ್ತ್‌ಲೆ.

ಆ ಫ್ಯಾಕ್ ಮಾದಯ್ಯ ಸುಮ್ಮನಲ್ಲ ಅವಳ ಮನೆಗೆ ಹೋದು, ಬಾದು ಎಲ್ಲ, ಛೆ, ನಾನು ಹೋಗ್ತಾ ಬರ್ತಾ ಇರೋಕಿತ್ತ್. ಯಾಗಾದ್ರೂ ಒಮ್ಮೊಮ್ಮೆ ಎರಡ್ ಕೆ.ಜಿ. ಅಕ್ಕಿ, ತರಕಾರಿಗೆ ಹಣ ಕೊಟ್ಟ್ ಬರ್ತಾ ಇದ್ರಿದ್ರೆ ಈಗ ಅವಳು ನನ್ನ ಕಸ್ಟಡಿಲಿ ಇರ್‌ತಿತ್ತ್.

ಆ ಚಂಗುಮಣಿ ಇದ್ದಿದ್ದರೆ ಅವನ ಮನೆ ಉಬ್ಬಲು ದಾಟಿಕೆ ಸಾಧ್ಯಇಲ್ಲೆ. ಮುಟ್ಟಿದವಂಗೆ ತಟ್ಟುವ ಜನ ಅಂವ. ಜೈಲ್‌ಲಿ ಇರ್‌ದು ನನ್ನ ಭಾಗ್ಯಾಂತ ರಂಜನ್ ಗ್ಯಾನ ಮಾಡ್‌ತ್.

ಚಂಗುಮಣಿ ಹಿಂದೆ ಬೋರ್‌ಗುಡ್ಡೆ ದೇವಯ್ಯನ ಗೂಂಡ ಆದರ್‌ಂದ ಅವಂಗೆ ದೇವಯ್ಯನ ಎಲ್ಲಾ ಬಸ್‌ಲಿ ಫ್ರೀಪಾಸ್. ದೇವಯ್ಯಂಗಾಗಿ ಒಂದು ಕೊಲೆ ಮಾಡಿ ಬುಟ್ಟ್ ಚಂಗುಮಣಿ ಜೈಲಿಗೆ ಹೋದ ವಿಚಾರ ದೇವಯ್ಯನ ಕೆಲ್ಸದವ್ರೆಲ್ಲ ಗೊತ್ತಿದ್ದ ಒಂದ್ ಓಪನ್ ಸೀಕ್ರೆಟ್.

'ಓ ! ಏನ್ ಚಂಗುಮಣಿ ?'

ಬೋರ್‌ಗುಡ್ಡೆ ಫಾಸ್ಟ್ ಎಕ್ಸ್‌ಪ್ರಸ್ ಬಸ್‌ನ ಕಂಡಕ್ಟರ್ ಬಷೀರ್ ಕೇಳ್ತ್.

'ಒಳ್ಳೆದ್'

ಚಂಗುಮಣಿ ಹೇಳ್ತ್

'ಜಾಮೀನ್‌ಲಿ ಬುಟ್ಟ್ಬ್ಯೋಳಾಂತ ಕಂಡದ್ದೆಲ್ಲ ?'

'ಹೌದು'

ಚಂಗುಮಣಿನ ಮಾತ್‌ಲಿ ಯಾವ ಕುಸಿನೂ ಇತ್ತ್‌ಲೆ.

'ಎಷ್ಟ್ ದಿನದ ಜಾಮೀನ್ ?

'ಅದರ್ನ ತಿಳ್ದ್ ಏನಾಕು ಈಗ ?'

ಚಂಗುಮಣಿದ್ ಸ್ವರ ಸ್ವಲ್ಪ ಬದಲಾತ್

'ಸು...ಸುಮ್ನೆ ಕೇಳ್ದೆ' ಬಷೀರ್ ಬೇರೆ ಪ್ರಯಾಣಿಕರಿಗೆ ಟಿಕೇಟ್ ಕೊಡ್ತಾ ಮುಂದೆ ಹೋತ್.

ಅಷ್ಟರ್ಲಿ ಟಿಕೆಟ್ ಚೆಕಿಂಗ್ ಮಾಡುವ ಜೋಸ್ ಮುಂದೆನ ಬಾಗಿಲ್‌ಂದ ಹತ್ತಿದಂವ ಚಂಗುಮಣಿನ ಕಂಡ್ ಹಿಂದಕ್ಕೆ ಹೋತ್.

ಓ ಏನ್ ಚಂಗುಮಣಿ ? ಸೌಖ್ಯನಾ ? ಈಗ ಸೆಂಟ್ರಲ್ ಜೈಲ್ ಹಳೇದರಂಗಲ್ಲಲಾ?

ಹಳೇ ವಿಚಾರ ನಂಗೆ ಗೊತ್ತ್‌ಲೆ, ನಾನ್ ಇದೇ ಮೊದ್ಲ್ ಹೋದ್. ದೊಡ್ಡ ಸುಖವೊಂದೂ ಇದ್ದಂಗಿಲ್ಲೆ.

ಬಸ್ ಬೋರ್‌ಗುಡ್ಡೆ ತಲಪಿತ್. ಚಂಗುಮಣಿ ಇಳ್ದ್ ತನ್ನ ಸೊಂಟನೊಮ್ಮೆ ಮುಟ್ಟಿ ನೋಡ್ತ್. ಆ ಹೊಸ ಹರ್ತದ ಚಾಕ್ ಅಲ್ಲೇ ಇತ್ತ್. ಚಾಕ್ ಉಟ್ಟೊಂತ ಗ್ಯಾರಂಟಿ ಆದಂಗೆ ಅಂವ ಸೀದ ಹೊಟೇಲಿಗೆ ಹೋತ್.

'ಏನ್ ಖಾದರ್ ಹೆಂಗೊಳ ?'

'ಓ...ಇದಾರಾ ! ಚಂಗುಮಣಿ ! ಯಾಣೊ ಎಪ್ಪಳಾ ವನ್ನದ್? ಇರಿಕ್'

'ಈಗ ಬರ್ತಾ ಒಳೆ'

ಚಂಗುಮಣಿ ಬೆಂಚಿಲಿ ಕುದ್ದ್‌ಕಂಡ್ ಹೇಳ್ತ್.

'ಓರ್ ರಂಡ್ ದಿವಸಂ ಮುಂಬ್ ವನ್ನೂಡಾಯಿನ್ನೂ ?'

'ಯಾಕೆ ಎರಡ್ ದಿನ ಮುಂದೆ ಬಂದಿದ್ರೆ ಏನಿತ್ತ್ ವಿಶೇಷ ?'

ಚಂಗುಮಣಿ ಕೇಳ್ತ್.

'ಆ ಬೋರ್‌ಗುಡ್ಡೆ ದೇವಯ್ಯ ಮೂಲಿಂಡೆ ಮೂತ ಮಗಂಡೆ ಕಲ್ಯಾಣಂ, ಲೋಗತ್ತುಳ್ಳವರೊಕ್ಕ ಕೂಡಿನ್ ಅರಿಯೋ ?'

ಖಾದರ್ ಮಲಯಾಳಲೇ ಹೇಳ್ತ್.

'ಅಷ್ಟೇ ತಾನೆ. ಅದೃಷ್ಟ ಇದ್ದಂವ ಮೊದ್ಲೆ ಮಾಡ್‌ಕಂಡವೆ. ಸುಖಲಿ ಇದ್ದವೆ. ಜೈಲ್‌ಲಿ ಇರವು ಅದರ್ನ ಗ್ಯಾನಮಾಡಿ ಫಲ ಇಲ್ಲೆ ಬುಡ್. ನಂಗೆ ಒಂದ್ ಪ್ಲೇಟ್ ಪಕೋಡ ಕಟ್ಟಿಕೊಡು.'

'ಚಾಯ ಬೇಂಡೆ ?'

'ಈಗ ಟೀ ಬ್ಯಾಡ ಸಾಯಂಕಾಲ ಬನ್ನೆ'

ಚಂಗುಮಣಿ ಪಕೋಡ ಪ್ಯಾಕ್ ತಗಂಡ್ ದುಡ್ಡ್ ಕೊಟ್ಟ್ ಸೀದ ಕಳ್ಳಂಗಡಿಗೆ ಹೋತ್.

'ಒಂದೆರಡ್ ಬಾಟ್ಲ್ ಒಳ್ಳೆ ಕಳ್ಳ್ ಕೊಡು ಸೀನಾ'

ಚಂಗುಮಣಿ ಕೇಳ್ತ್.

ಸೀನ ಕಳ್ಳ್ ಕೊಟ್ಟತ್.

ಚಂಗುಮಣಿ ಒಮ್ಮೆ ತನ್ನ ಸೊಂಟಕ್ಕೆ ಕೈ ಹಾಕಿ ಚಾಕ್ ಉಟ್ಟಾತ ನೋಡಿ ಕಂಡತ್. ಚಾಕ್ ಅಲ್ಲೇ ಉಟ್ಟ್. ಕಳ್ಳ್ ಕುಡ್ದ್ ಆದ ಮೇಲೆ ಬೆವರಿಕೆ ಸುರಾತ್.

ಗೌರನ ಹೆಂಗೆ ಕೊಲ್ಲೊಕೂಂತ ಅಂವ ಮನ್ಸ್‌ಲೇ ಉಪಾಯ ಹುಡ್ಕಿಕೆ ಸುರ್ ಮಾಡ್ತ್.

'ಸೀನಾ ಒಂದೆರಡ್ ಪೆಗ್ಗ್ ರಂ ಬೇಕಲ್ಲಾ'

ಸೀನ ಕೊಟ್ಟ ರಮ್‌ಗೆ ನೀರ್ ಸನ ಸೇರ್ಸದೆ ಅಂವ ಕುಡ್ತ್.

ಇಪ್ಪತ್ತ್ ಸಾವ್ರ ರೂಪಾಯಿನ ಕಂತೆ ಅಂವನ ಕಣ್ಣ್‌ಮುಂದೆ ಬಿದ್ದಂಗೆ ಚಂಗುಮಣಿಗೆ ಆತ್.

ಇ...ಪ್ಪ...ತ್ತು...ಸಾ...ವ್ರ. ಮತ್ತೆ ಒಂದ್ ಪೆಗ್ಗ್ ಇಳ್ಸಿಕಂಡ್ ದುಡ್ಡ್ ಕೊಟ್ಟ್ ಅಂವ ಕಳ್ಳಂಗಡಿಂದ ಹೊರಟತ್.

ನಾಡ್ ಕೊಲ್ಲಿ ಮಾದಪ್ಪನ ಮಗಳ ಆಯುಷ್ಯ ಮುಗ್ತ್. ರಂಜನ್ ಜೊತೆ ಎರಡೇ ರಾತ್ರಿ ಅವುಳ್‌ಗೆ ಬಾಳಿಕೆ ಅವಕಾಶ. ರಂಜನ್ ಇನ್ನ್ ಬ್ಯಾರೆಗೂಡೆನ ನೋಡೊಕು ಕುಡ್ದ ಅಮಲ್‌ಲಿ ತಸಿಗೆ ತಾನೇ ಹೇಳಿ ಕಂಡ್ ಅಂವ ಮೊದ್ಲ್ ಅವನ ಮನೆ ಕಡೆ ನಡ್ತ್. [ಸಶೇಷ]

## "ಎಕ್ಸ್‌ಪ್ರೆಸ್ ಸೊಸೆ

"ಉಯ್ಯೀ ಮಾಂವಾ...ಎಷ್ಟೋ ದಿನಾತಲ್ಲ ಮಾಂವ ನಿಮ್ಮನ ಕಾಣದೆ. ಸೂಟ್‌ಕೇಸೆಲ್ಲಾಗಿ ದೂರ ಹೊರ್ಟಂಗುಟ್ಟಲ್ಲಾ ಮಾಂವಾ ? ಮನೆಲೆಲ್ಲಾ ಉಸಾರೊಳನಾ ? ಮತ್ತೆ ಅತ್ತೆಗೇನೋ ಸೌಖ್ಯ ಇಲ್ಲೆತ ಯಾರೋ ಹೇಳ್ತಿದ್ದೊ. ನಿಮ್ಮ ಕೊಟ್ಟಿಗೆ ರಿಪೇರಿ ಆತಾ ? ನಾ ಮರ್ತೇ ಬುಟ್ಟಿದ್ದೆ–ನಿಮ್ಮ ಎತ್ತ್‌ದ್ ಉಂಡೆ ಜಾರಿ ಹೋಗಿತ್ತಲ್ಲಾ, ಅದ್ ಹೆಂಗಾತ್ ಮಾಂವ? ನೀವ್ ಈಗ ಬಾದೇಲಿ ಯಾಕೆ ಮಾಂವ? ಅತ್ತೆನ ಕರ್ಕಂಡ್ ಬನ್ನಿ ಮಾಂವ ಒಮ್ಮೆ. ನೀವ್‌ಗೆ ಯಾಲ ರೇಟ್ ಹೆಂಗೆ ಸಿಕ್ತ್ ? ಈಗಳೇ ಕೊಡ್ಬಡಿ

**ಬಿ. ಆರ್. ಜೋಯಪ್ಪ,** ಮದೆ.

ಮಾಂವ. ಯಾರೋ ಹೇಳ್ತಿದ್ದೊ ಕಿಲೋ ಒಂದರ ಸಾವ್ರ ರೂಪಾಯಿ ಆದೆಗಡ ಮಾಂವ. ನೀವ್ ಬುಡಿಯಪ್ಪಾ, ನಿಮಿಗೆ ಗೊತ್ತಿಲ್ಲದೆ ಉಟ್ಟಾ ? ನೀವ್ ಆದರ್ಲೆಲ್ಲಾ ಭಾರೀ ಉಸಾರ್ ಅಲ್ಲ ಮಾಂವ ? ಈ ವೊರ್ಷ ಕಾಫಿ ಎಸ್ಟ್ ಖಂಡಿ ಆದು ? ಆಯ್ಯೋ ನಾ ಕೇಳುವರ ಮರ್ತೇ ಬುಟ್ಟಿದ್ದೆ. ಚಾಮೆಪ್ಪನ ಸೊಂಟ ಬೇನೆ ಗುಣ ಆತಾ ? ನೀವ್ ಬಾರದಿದ್ದರೂ ನಾವ್‌ಗೆಲ್ಲ ಗೊತ್ತಾದೆ ಮಾಂವ. ಹ್ಞಾ ಹೇಳ್ದಂಗೆ ನಿಮ್ಮ ಕೊತ್ತಿ ಮರಿ ಹಾಕುಟ್ಟಾ ? ನಮ್ಮನೇಲಿ ಎಲಿಗ ತುಂಬಿ ಹೋಗೋಳೊ. ಪೊಪ್ಪನ ಕರೀ ಕೋಟೆಲ್ಲಾ ಚೆಲ್ಲ್ ಚೆಲ್ಲ್ ಮಾಡಿಬುಟ್ಟೋಳೊ ಹಾಳ್ ಎಲಿಗ. ಮಾಂವ ನೀವ್ ಹನಿ ಲಾಚಾರಾಗೊಳರಿ ಈಗ. ನಮ್ಮ ಪೊಪ್ಪನೂ ಅಮ್ಮನೂ ನಿಮ್ಮಲ್ಲಿಗೆ ಹೊರ್‌ಡ್ತಾ ಒಳೊ. ಹೊರ್ಡಿಕಾಕನ ಯಾರಾರ್ ಬಂದ್‌ಕಂಬೊದುತ. ಮೊನ್ನೆ ಹುತ್ತರಿ ಗೆಣ್ಸ್, ಒಂದಷ್ಟ್ ಇಲಾತಿ ಚೆಟ್ಟ್, ಸೋಂತೆ ಮಿಡಿ ತಕ್ಕಂಡ್ ಹೊರ್ಡ್‌ಕನ ಬೆಂಗ್ಳೂರ್‌ಂದ ರಾಜಣ್ಣನೂ, ಚಂದ್ರಣ್ಣನೂ ಬಂದ್‌ಕಂಡೊ. ಬಂದವ್ ಸನಿಗ ಒಂದ್‌ವಾರ ಆದ್ರೂ ಮಸ್‌ಗಿತ್ಲೆ. ಅಮ್ಮಂಗೆ ಸಿಟ್ಟ್ ಬಂದುಂಗಾತ್. ಯಂತಲ ಮಾಂವ, ಬಂದವ್ ಕೂಡ್ಲೆ ಹೊರ್ಡದೆ ಹುಂಗೆ ಅಂಟೆ ಕಂಡೇ ಇರ್ದು ಸರೀನಾ ಮಾಂವ ? ನೀವ್ ಇದ್ಕೆಯುಂತ ಹೇಳ್ರಿ? ನೀವ್ ಈಗ ಬಸ್ಸ್‌ಗೆ ಹೊರ್ಟ್ರದಾ ಮಾಂವ ? ನಮ್ಮ ಪೊಪ್ಪ ಜೀಪ್ ತೆಗ್ಯೆಕು ಜೀಪ್ ತೆಗೆಕೂಂತ ಹೇಳಿಕಂಡೇ ಇದ್ದದೆ. ಹಂಗೆ ಹೇಳಿ ವರ್ಷ ಐದಾರಾತ್. ಪ್ರತೀ ವರ್ಷ ಅದ್ರ ರೇಟ್ ಹತ್ತೋ ಇಪ್ಪತ್ತೋ ಸಾವ್ರ ಜಾಸ್ತಿ ಆದೆಲ್ಲಾ? ಹಂಗಾಗಿ ಪೊಪ್ಪಂಗೆ ಜೀಪ್ ತೆಗೆಕೇ ಆತ್‌ಲೆ ಮಾಂವ. ಅಲ್ಲ ಮಾಂವ ಈ ವರ್ಷದ ಮಳೆ ಯಂತಲಾ? ನಮ್ಮ ಬೆಳೆಯೆಲ್ಲಾ ಹಣ್ಣಾಗಿ ಚುಗ್ಗಿ ಹೋಗುಟು. ಈ ವರ್ಷ ಹೆಂಗೆ ಬೆಳೆ ತೆಗೆಯೋದುತ ಪೊಪ್ಪ ಬಾಯಿಬಡಿತಿದ್ದೊ. ನಿಮ್ಮ ಕಡೆ ಕರೆಂಟ್ ಉಟ್ಟಾ ಮಾಂವ. ನಮ್ಮಲ್ಲಿ ಕರೆಂಟ್ ಇಲ್ಲದೆ ಹದ್ನೈದ್ ಇಪ್ಪತ್ ದಿನಾತ್. ಕರೆಂಟ್ ತಂತಿ ಬೇರೆ ಕೆಳಗೆ ಉಟ್ಟ್. ಆ ತಂತಿಗೆ ಬಟ್ಟೆ ಒಣಗಿಕೆ ಹಾಕುದೇ ಒಳ್ಳದ್ ಕಂಡದೆ ಮಾಂವ. ಮಾಂವ ಮೊನ್ನೆ ಏನಾತ್ ಗೊತ್ತುಟಾ ? ನಮ್ಮ ಪೊಪ್ಪಂಗೆ ಬಟ್ಟೆ ಕೋಸಿಕಂಡಂಗಾಗಿ ಕೂರಿಕೆ ಬತ್ತದೆ, ನಿಲ್ಲಿಕೂ ಆಗದೆ ರಂಪ ಆಗೋತು. ನಾವೆಲ್ಲಾ ಆಸೆ ಬುಟ್ಟಿದ್ದೊ. ಅಷ್ಟೊತ್ತಿಗೆ ಮೇಲೆ ಮನೆ ಚಾಮೆಪ್ಪ ಬಾತ್. ಪೊಪ್ಪನ ಹೊಟ್ಟೆ ಮೇಲೆ ಸಗಣಿ ಕಟ್ಟೆ, ಕಟ್ಟೆ, ನೆಣೆ ಹೊತ್ತಿಸಿ ಇಸಿತ್. ಮತ್ತೆ ಒಂದ್ ಜೊಂಬುನ ಕಪ್‌ಚಿತ್. ಪೊಪ್ಪನ ಹೊಟ್ಟೆ ಕೋಸಿಕಂಡದ್ ಸರಿಯಾತ್. ಮಾಂವಾ ನಿಮ್ಮಲ್ಲಿ ಹೊಸಾ ವರ್ಷಕ್ಕೆ ಗದ್ದಾಳ ಉಟ್ಟಾ ?"

ಹಿಂಗೆ ಪರ ಪರ ಮಾತಾಡ್ದ ಸೊಸೆ, ಮಾಂವಂಗೆ ಮಾತಾಡಿಕೇ ಬುಟ್ಟಿಟ್‌ಲೆ. ಅಷ್ಟೊತ್ತಿಗೆ ಮಾಂವನ ಬಸ್ ಬಾತ್. ಮಾಂವ ಓಡಿ ಹೋಗಿ ಬಸ್‌ಹತ್ತಿ ಕುದ್ದತ್. ಆಗ ಸೊಸೆ ಜೋರಾಗಿ 'ಎಲ್ಲವುನ ಕೇಳ್ದೆಂತೇಳಿ ಮಾಂವತೇಳಿ' ಟಾಟಾ ಮಾಡ್ತ್. ಇದ್ದ ಜನ ಎಲ್ಲ ಅತ್ತ ನೋಡ್ದೊ. ಮಾಂವ ಮೊಕ ಪೂಜಿಕಂಡ್ತ್. ಸೊಸೆಗೆ ದೊಂಡೆ ಪಸೆ ಇಲ್ಲದಂಗಾಗಿ ಕಡೆಗೆ ಐಸ್‌ಕ್ಯಾಂಡಿನ ಹೀಂಪಿಕಂಡ್ ನಿತ್ತ್‌ಕಂಡತ್. ನೀವ್‌ಗೂ ಇಂತಾ 'ಎಕ್ಸ್‌ಪ್ರೆಸ್' ಸೊಸೆ ಉಟ್ಟಾ ? ●

## ವಿರಾಜಪೇಟೆಯಲ್ಲಿ ಗೌಡ ಸಮಾಜ

ಕೊಡಗಿನ ದಕ್ಷಿಣದ ವಿರಾಜಪೇಟೆ ತಾಲೋಕಿನಲ್ಲಿ ಗೌಡ ಜನಾಂಗ ಬಹಳ ವಿರಳವಾದರೂ ಗೌಡ ಸಮಾಜ ಕಟ್ಟಲು ದಿನಾಂಕ 20–12–1998ನೇ ಭಾನುವಾರ ವಿರಾಜಪೇಟೆಯ ಕರ್ನಾಟಕ ಸಂಘದಲ್ಲಿ ಸಭೆ ಸೇರಿ ಪಡಿಕಲ್ ಮಾದಪ್ಪನವರನ್ನು ಅಧ್ಯಕ್ಷರನ್ನಾಗಿ ಆರಿಸಿ ಮುಂದಿನ ಸಾಲಿಗೆ ಆಡಳಿತ ಮಂಡಳಿ ಯವರನ್ನು ಸಹ ಆರಿಸಲಾಗಿದೆ. ಹೆಚ್ಚಿನ ವಿವರಗಳನ್ನು ಮುಂದಿನ ಸಂಚಿಕೆಯಲ್ಲಿ ಕೊಡಲಾಗುವುದು. —ಸಂ

## ನಗೆ ಹನಿ

ಕಿರಣ್ : ಯಾಕೆರಾ ನಮ್ಮ ಭಾಷೆ ಮಾತಾಡಿಕೆ ನಾಚಿಕೆ ?

ಶರಣ್ : ಹೋತ್‌ಗಡ, ಬಾತ್‌ಗಡ, ಅಂಬಲಿ ಮಡಿಕೆ ತೂತ್‌ಗಡತ ಎಲ್ಲವ್ ಹಂಗ್ಸಿವೆ.

ಕಿರಣ್ : ಅದ್‌ಕೆ ನೀ ಹೇಳಕಾಯ್ತ್, ನಾನ್ ದುಡ್ಡ್ ಕೊಟ್ಟನೆ ನೀನ್ ತೂತ್ ಮುಚ್ಚಿಕೊಟ್ಟಿಯಾತ !

—ನಂಗಾರು ಕಿರಣ್ ಕೀರ್ತಿಪ್ರಸಾದ್,
ಯಡವಾರೆ.

# ಸಣ್ಣಪ್ಪನ ಕೊತ್ತಿ ಮತ್ತೆ ಸಣ್ಣವ್ವನ ಕೋಳಿಗ

ನಮ್ಮ ಸಣ್ಣವ್ವನ ಮನೆಲಿ ಬಾರಿ ಕೋಳಿಗ ಇದ್ದೋ. ಸಣ್ಣವ್ವ ಕೋಳಿಗಳ್ನ ತಾನ್ ಹೆತ್ತ ಮಕ್ಕಳಿಗಿಂತ ಹೆಚ್ಚಾಗಿ ಬಾರೀ ಲಾಯಿಕಾಗಿ ಸಾಕ್‌ತಿತ್ತ್. ಸಣ್ಣವ್ವನಕ್ಕಲೆ ಕಡ್ಲೆ ಕೋಳಿಗ ಕುಳ್ಳಿ ಹೆಂಟೆಗ, ಕೆಂಪು ಹುಂಜಗ, ಬಿಳಿ ಹೇಂಟೆಗ, ಕರೀ ಹೇಂಟೆಗ ಹಿಂಗೆ ಸುಮಾರ್ ಹೇಂಟೆಗ, ಹುಂಜಗ, ಲಾಕಿಗ ತೇಳಿಕಂಡ್ ಹತ್ತ್ ನಲ್ವತ್ತ್ ಕೋಳಿಗ ಇದ್ದೋ. ಈ ಸಣ್ಣವ್ವಂಗೆ ಬೆಳಿಗೆದ್ದ್ ಒಂದ್ ಗಲಾಸ್ ಕಾಫಿ ಕುಡ್ದ್ ಕೋಳಿಗಳ ನೋಡುದೆ ಕೆಲ್ಸ. ಸಣ್ಣವ್ವನ ಮಗಳಿಗೆ ಅಡಿಗೆ ಕೆಲ್ಸ ಆದರೆ ಸಣ್ಣವಂಗೆ ಕೋಳಿಗಳ್ದ್ ಕೆಲ್ಸ. ಕೋಳಿಗಳ್ಗೆ ಭತ್ತ ಹಾಕ್ದು, ನೀರ್ ಹೊಯ್ಯುದು, ಕೋಳಿ ಹೇಲ್ ಎತ್ತಿ ಗುಡ್ಸುದೇ ಸಣ್ಣವ್ವನ ಕೆಲ್ಸ. ಸಣ್ಣವ್ವ ಕೋಳಿಗಳ್ಗೆ ಲಾಯಿಕ್ಕಾಗಿ ತಿನಿ ಕೊಡ್‌ತ್ತಿದ್ದರ್‌ಂದ ಕೋಳಿಗ ಪೊರ್ಲಾಗಿ ಬೆಳಿತಿದ್ದೋ. ಹೇಂಟೆಗ ಮೊಟ್ಟೆ ಹಾಕ್‌ತಿದ್ದೋ. ಸಣ್ಣಪ್ಪಂಗೆ ಮೊಟ್ಟೆ ತಿಂಬಕೆ ಆಸೆ ಆದ್ರೂ, ತಿಂಬಕೆ ಬಾರಿ ಬೇಜಾರ್. ತಿಂದರೆ ತಿಂದ್ ಹೋದೆ, ಕಾಪ್‌ಗೆ ಮಡ್‌ಗಿರೆ ಮರಿಯಾದೇತೇಳಿ ಮನೆಯವ್ಕೆ ತಿಂಬಕೆ ಕೊಡ್‌ತ್ತಿತ್ಲೆ. ನೆಂಟ್ರ್ ಬಂದ್ ಬುಟ್ರೆಂತೂ ಹೇಳುದೇ ಬೇಡ. ಕೋಳಿ ಕೊಲ್ಲಿಕೆ ಬೇಜಾರಾಗಿ ಮೊಟ್ಟೆ–ಗೆಂಡೆ ಸಾರ್, ರೊಟ್ಟಿ ಮಾಡಿ ನೆಂಟ್ರ್‌ನ ಕಳ್ಸಿ ಬುಡ್ತಿತ್ತ್. ಹಿಂಗೆ ಸಣ್ಣವ್ವ ಕೋಳಿಗೆ ಕಾಪ್ ಮಡ್‌ಗಿ ಸುಮಾರ್ ಕೋಳಿಗಳ ಮಾಡ್ತ್. ಸಣ್ಣವ್ವ ಕೋಳಿಗಳ ಮಾರಿ ದುಡ್ಡು ಮಾಡ್ತಿತ್ತ್. ಒಂದಿನ ಸಣ್ಣಪ್ಪ ಸಂತೆಗೆ ಹೋಕಾಕನ ಸದ್ಯ ದುಡ್ಡಿತ್ಲೆ. ಒಂದು ಐವತ್ತ್ ರೂಪಾಯಿ ಇದ್ದರೆ ಕೊಡ್ನೇ ತೇಳಿ ಕೇಳ್ದೋ. ಕಾಫಿ ಮಾರ್‍ಕನ ಅಷ್ಟ್ ದುಡ್ಡ್ ಹಿಡ್ದರೆಲ್ಲಾ, ಒಂದಿನಾರ್ ಒಂದ್ ಹತ್ತ್ ರೂಪಾಯಿನಾರ್ ಇಟ್ಟ್‌ಕನೇ ತೇಳಿ ಕೊಟ್ಟೋಳ್ರಿಯಾ ? ತೇಳಿ ರೋಪ್ ಹೊಡ್ತ್. ಸಣ್ಣವ್ವ ಸಣ್ಣಪ್ಪನ ಬಾಯಿ ಮುಚ್ಸಿ ಬುಡ್‌ತಿತ್ತ್. ಒಂದಿನ ಸಣ್ಣಪ್ಪನ ಕುಳ್ಳಿಹೇಂಟೆ ಕಾಪ್ ಕುದ್ದ್ 10–12 ಮರಿ ಮಾಡ್ತ್. ಮರಿಗ ದಿನಂದ ದಿನಕೆ ಲಾಯಿಕ್ಕಾಗಿ ಬೆಳೀತಿದ್ದೋ ಹಂಗೆ ಒಂದೊಂದೇ ಕಾಣದಾಗ್‌ತ್ತಿದ್ದೋ. ಸಣ್ಣವಂಗೆ ಬಾರಿ ಬೇಜಾರಾತ್. ಒಂದ್ ದಿನ ಸಣ್ಣಪ್ಪನ ಕೊತ್ತಿ ಮೂರ್‌ಮೂರ್ ತೇಳಿಕಂಡ್ ಪಿಳ್ಳೆನ ಹೊತ್ಕಂಡ್ ಬಾತ್. ನಿನ್ನ ಗುಮ್ಮ ಮೆಟ್ಟ್ಕೆ ತೇಳಿಕಂಡ್ ಸಣ್ಣವ್ವ ಕಲ್ಲ್ ಬಡಿಗೆ ತಕಂಡ್ ಕೊತ್ತಿ ಹಿಂದ ಓಡ್ತ್. ಈ ಸುಟ್ಟ ಕೊತ್ತಿ ಹಿಂದೆ ಓಡಿಕೆ ಬೇರೆ ಆದುಲೆ. ಮನೆಗೆ ಬಾ ನಿನ್ನ ಸರಿ ಮಾಡ್ನೆ ತೇಳ್ಕಂಡ್ ಸಣ್ಣಪ್ಪ ಗೊಣ್ಗಿಕಂಡ್ ಮನೆಗೆ ಬಾತ್. ಎಂತಾ ಸಾವುನೆ ನಿಂದ್ ರೋಗ. ದಿನಾ ಗೊಣ್ಗಿಕಂಡ್ ಸತ್ತಿಯೆಲ್ಲಾ, ನಿಂಗೆ ಎಂತಾತ್‌ತೇಳಿಕಂಡ್ ಸಣ್ಣಪ್ಪ ಸಣ್ಣವಂಗೆ ಬೊಯ್ದೋ. ನೀನ್ಗೆ ಎಂತ ಗೊತ್ತು. ನಾನ್ ಕೋಳಿಗಳ್ಗೆ ಮೇಚಿ ಹಾಕಿ ಸಾಕ್ವ ಕಷ್ಟ ನಂಗೆ ಗೊತ್ತು. ಈ ಸುಟ್ಟ ಕೊತ್ತಿ 7–8 ಪಿಳ್ಳೆಗಳ ಹಿಡ್ದ್ ತಿಂದ್ ಬುಡ್ತಲ್ಲಾ ಎಂತ ಹೇಳೊಕು. ಮರ್ಯಾದಿಂದ ಆದರ್ನ್ ಎಲ್ಲಾರ್ ತಕಂಡೋಗಿ ಬುಡಿ ತೇಳಿ ಸಣ್ಣವ್ವ ಸಣ್ಣಪ್ಪಂಗೆ ಬೊಯ್ತ್. ಸಣ್ಣಪ್ಪಂಗೆ ಕೊತ್ತಿತೇಳ್ರೆ ಜೀವ, ಸಣ್ಣಪ್ಪ ಎದ್ದ್ ಮುಖ ತೊಳ್ದ್ ಒಲೆ ಬುಡಲಿ ಬಂದ್ ಕುದ್ದಂಗೆ ಸಣ್ಣಪ್ಪನ ತೊಡೆ ಮೇಲೆ ಬಂದ್ ಕುದ್ದ್ ಬುಡ್ತಿತ್ತ್. ಎಲ್ಲಾರ್ ಹೋಗಿ ಬಾಕಾಕನ ಬಾಕೆ ಮುಂದೆ ಅಂಗಳಕೆ ಓಡಿ ಹೋಗಿ ಮಿಂಯೋ ತೇಳಿ ಮರ್ಸ್ಟ ಸಣ್ಣಪ್ಪನಕ್ಕಲೆ ಓಡಿ ಹೋಗ್‌ತ್ತಿತ್ತ್. ವಾರ ವಾರ ಸಂತೆಗೆ ಹೋಗಿ ಬಾಕನ ಕೊತ್ತಿಗೆ ಮಿಠಾಯಿ, ಕಡ್ಲೆ ಎಲ್ಲಾ ಸಣ್ಣಪ್ಪ ತರ್ತಿತ್ತ್. ಹಿಂಗೆ ಸಣ್ಣಪ್ಪಂಗೆ ಕೊತ್ತಿನ ಕಂಡರೆ ಬಾರಿ ಕುಷಿ. ಕೊತ್ತಿಗೆ ಸಣ್ಣಪ್ಪಂನ ಕಂಡರೆ ಬಾರೀ ಕುಷಿ. ಇಂತ ಕೊತ್ತಿನ ಎಲ್ಲಾರ್ ತಕಂಡೋಗಿ ಬುಡಿ ತೇಳ್ಕನ ಸಣ್ಣಪ್ಪಂಗೆ ಬಾರೀ ಬೇಜಾರಾಗಿ ಹೋತ್. ಸಾಯುಲಿ ಬುಡ್ನೆ ಪಾಪ ಕೊತ್ತೆಲಾ ! ಇನ್ನ್ ಹಿಡಿಯಕಿಲೆ. ನೀನ್ ಸ್ವಲ್ಪ ದಿನ ಪಿಳ್ಳೆಗಳ ಮುಚ್ಚಿಹಾಕಂಡ್ ಸಾಕ್. ಆಗ ಕೊತ್ತಿ ಪಿಳ್ಳೆ ಹಿಡಿಯುದರ ಮರ್ತ್‌ದೆತ ಸಣ್ಣಪ್ಪ ಸಣ್ಣವಂಗೆ ಹೇಳ್ತೊ. ಸಣ್ಣವ್ವ ಗೊಣ್ಗಿಕಂಡ್ ದಿನಾ ಮುಚ್ಚಿ ಹಾಕಂಡ್ ಸಾಕ್‌ತಿತ್ತ್. ಒಂದಿನ ಸಣ್ಣವ್ವ ಪಾಪ ಪಿಳ್ಳೆಗಳ ಎಷ್ಟ್ ತೇಳಿ ಮುಚ್ಚಿ ಹಾಕುದು. ಸ್ವಲ್ಪ ಕಾಲಾಡಲಿ ತೇಳಿ ಬುಟ್ಟಿತ್. ಈ ಕೊತ್ತಿ ಪಿಳ್ಳೆಗಳ ಕಾಂಬಕನ ತಿಂಬಕೆ ಆಸೆ ಆಗಿ 2–3 ಪಿಳ್ಳೆಗಳ ತಿಂದೇ ಬುಡ್ತ್. ಸಣ್ಣವ್ವಂಗೆ ಈ ಸಾರಿ ಮಾತ್ರ ತಡೆಯಕೆ ಬೊತ್ತಾತ್. ಕಂಡಾಬಟ್ಟೆ ಸಣ್ಣಪ್ಪನೊಟ್ಟಿಗೆ ಜಗಳಾಡಿಬುಡ್ತ್. ಸಣ್ಣಪ್ಪಂಗೆ ಬೇಜಾರಾಗಿ ಈ ಸುಟ್ಟ ಕೊತ್ತಿಂದಾಗಿ ಯಾಗೊಳ್. ಈ ಸುಟ್ಟನ್ನ ಕೈಂದ ಬೈಗಳ ತೇಳಿ ಕಂಡ್ ಮಡಿಕೇರಿ ಮೀನ್ ಮಾರ್ಕೆಟ್‌ಗೆ ತಕಂಡೋಗಿ ಬುಟ್ಟ್ ಬುಟ್ಟೋ. ●

—ದೇವಜನ ಶೀಲಾ ಉತ್ತಯ್ಯ,
ಕುಂಬಳದಾಳು

---

**ಕೊಡಗು ಸಂಗಾತಿ ಪತ್ರಿಕೆಗೆ**
**ಇಂದೇ ಚಂದದಾರರಾಗಿ**

## ಸ್ನೇಹಿತರ ಮಾತ್

ಚಿಣ್ಣಪ್ಪಣ್ಣ ಮತ್ತೆ ಸುಬ್ಬಯ್ಯಣ್ಣ ಈಗ ಎರಡ್ ತಿಂಗಂದ ತುಂಬಾ ದೋಸ್ತಿಗ. ಇಬ್ಬರೂ ಸಾಯಂಕಾಲ ಐದ್ ಗಂಟೆ ಗಾಕನ ಊರ್‌ದ್ ವೈನ್‌ಶಾಪ್‌ಲಿ ಜೊತೆ ಸೇರಿ ಒಟ್ಟಿಗೆ ಕುಡೆತಿದ್ದೊ. ಕುಡ್ದ ಮೇಲೆ ಇಬ್ಬರಿಗೂ ಅವರವರ ಅಪ್ಪನ ಅಜ್ಜನ ನೆನಪಾದೆ.

ಚಿಣ್ಣಪ್ಪಣ್ಣ ಹೇಳ್ತೆ 'ಸುಬ್ಬಯ್ಯಣ್ಣ ನಂಗೆ ಅರ್ಧ ಕುಪ್ಪಿ ಕುಡೆಯುಕಾಕನೇ ಕಾಲೆರಡ್ ಅಲ್ಲಾಡಿ ಹೋದನೆ. ಆದ್ರೆ ನನ್ನ ಅಪ್ಪ ಒವ್ಮೆ ಒವ್ಮೆಲೆ ಐದ್ ಕುಪ್ಪಿ ಕುಡ್‌ದ್ ಎರ್‌ಡ್ ದಿನ ಅಲ್ಲಾಡದೆ ಮಲಗಿದೊತ ನಮ್ಮವ್ವ ಹೇಳ್ತಿತ್ತ್. ಅಷ್ಟ್ ಗಟ್ರಾಸ್ ನನ್ನಪ್ಪ.'

ಆಗ ಸುಬ್ಬಯ್ಯಣ್ಣಂಗೆ ಅವರ ಅಜ್ಜನ ನೆನಪಾದೆ. ಅವು ಹೇಳ್ದೊ, 'ಹೂಂ...ನನ್ನ ಅಜ್ಜ ಎಷ್ಟ್ ಗಟ್ಟಿ ಮುಟ್ಟ್‌ನ ಮನುಷ್ಯಾ ಗೊತ್ತಾ? ಅರ್ಧ ಕುಪ್ಪಿ ಕುಡ್ಸರೆ ಅರ್ಧ ಆನೆ ಬಲ ನನ್ನಜ್ಜಂಗೆ. ಐವತ್ತ್ ಜನಕ್ಕೆ ಹೊಡಿಯಕೆ ಹೋಗ್ತಿತ್ತ್. ಹಂಗೆ ಆವರ ಕೈಯಿಂದ ಹೊಡ್ಸಿಕಂಡ್ ಬಾತ್ತಿತ್...ಈಗ ನಾವ್ ಎಂಥಕೊಳ್‌ದ್‌ತ ನಾ ಕೇಳ್ದ... ಅರ್ಧ ಅಲ್ಲಾ... ಒಂದರ್ಧ ಹಾಕಂಡೂ್ರ ಒಬ್ಬಂಗಾದ್ರು ಹೊಡಿಯಕೆ ತಾಕತ್ತ್ ಉಟ್ಟಿತಾ ತಿರ್‌ಗಿ ಕೊಟ್ಟರೆ ಅಂವನ ಕಾಲಡಿಲಿ ನಾವ್ ಅಡ್ಡ ಬಿದ್ದೋಕು... ಸರಿ...ನಾ ಇನ್ನ್ ಮನೆಗೋಕು...ಹೇಳ್ದಂಗೆ ನಮ್ಮಿಬ್ಬರದು ಸ್ನೇಹ ಸುರು ಆಗಿ ಎರ್‌ಡ್ ತಿಂಗ ಆತ್ ನೋಡು ಒಂದ್ ದಿನಾನು ನಾನ್ ನನ್ನ ಮನೆಗೆ ಕರ್ತ್‌ಲೆ ನಿನ್ನನ...'

'ಅದ್ಸರೀ ನಾನೆಂಥವ? ಇಷ್ಟ್ ದಿನಾಗಿ ನಾನ್ ಸಹ ನಿನ್ನ್ ಮನೆಗೆ ಬಾತ್ಲೆ ನೋಡು...ಹೇಳ್ದಂಗೆ ನಿನ್ನ ಮನೆ ಎಲ್ಲಿ ಯಾದೆ ಹೇಳ್...'

'ನನ್ನ ಮನೆಗೆ ನೀನ್ ಕಣ್ಣ್‌ಮುಚ್ಚಂಡೇ ಬರಕ್. ಮೇನ್ ರೋಡ್‌ಲಿ ಇರ್ದು. ಬರೀ ಗೂಡೆಗ ಓದೋ ಕಾಲೇಜಿನ ಹಕ್ಕಲೆನೆ ನನ್ನ ಮನೆ ಇರ್ದು'

ಗೂಡೆಗ ಮಾತ್ರ ಓದೋ ಕಾಲೇಜಾ? ಅದ್ ಎತ್ತ ಬಿದ್ದದೇ?'

'ಅಷ್ಟ್ ಗೊತ್ತಾದುಲೆ ನಿಂಗೆ?...ಆ ಕಾಲೇಜ್ ಇರ್ದು ನನ್ನ ಮನೆ ಹಕ್ಕಲೆನೇ...'

'ಓಹೋ...ಸ್ವಲ್ಪ ಹಾಕಂಡ್ರೆ ನಂಗೆ ತಲೆ ಓಟ ಇಲ್ಲೆತಾ ನಿನ್ನ ಗ್ಯಾನನಾ?...ನಿನ್ನ ಮನೆ ಇರ್ದು ಆ ಗೂಡೆಗಳ ಕಾಲೇಜತ್ರ...ಗೂಡೆಗಳ ಕಾಲೇಜ್ ಇರ್ದು ನಿನ್ನ ಮನೆಯತ್ರ ತಾನೇ ಅದ್ಸರಿ...ನನ್ನ ಮನೆಗೆ ನೀನ್ ಬರೊಕ್ಕು...ನನ್ನ ಮನೆ ಪೊಲೀಸ್ ಸ್ಟೇಷನ್ ಹತ್ರ...'

ಪೊಲೀಸ್ ಸ್ಟೇಷನ್ ಹತ್ರ?...ಯಾವ ರೋಡ್ ಹಿಡಿಯಕ್ಕು?'

'ಅಷ್ಟ್ ಗೊತ್ತಾದುಲೆ ಮಾರಾಯಾ ನಿಂಗೆ? ನನ್ನ ಮನೇನ ಹುಡ್ಕಿಕಂಡ್ ಬಾ, ಆಗ ನಿಂಗೆ ಪೊಲೀಸ್ ಸ್ಟೇಷನ್ ಸಿಕ್ಕಿದೆ,

'ನಾನ್ ಇನ್ನ್ ಬನ್ನೇ...ಹೆಣ್ಣ್ ನನ್ನ ದಾರಿ ಕಾಯ್ತಿರುದು, ಗುಡ್‌ನೈಟ್.' ●

—ಶ್ರೀಮತಿ ಕೊಂಪುಳೀರ ಪೊನ್ನು ಬಸಪ್ಪ,
ಮಡಿಕೇರಿ.

## ಗೌಡ ಸಂಸ್ಕೃತಿಲಿ ಒಗ್ಗಟ್ ಯಾಕಿಲ್ಲೆ

'ನಮ್ಮವು ಬಹಳ ಹಿಂದೆ ಒಳೊ. ಹೊಟ್ಟೆಕಿಚ್ಚ್, ಕೇಡ್ ಮತ್ಸರಕ್ಕೆ ಮಾತ್ರ ಆವೊ–ನಮ್ಮವು. ಅವ್ಕಿಂತ ಕಡೆ, ಇವ್ಕಿಂತ ಕಡೆ...ಹಿಂಗೆ, ಹಂಗೆ ನೂರೆಂಟ್ ಅವಹೇಳ್ನ ಇಂದಿಗೆಸ ನಮ್ಮ ಜನಾಂಗದ ಬಗ್ಗೆ ಉಟ್ಟ್. ಎಲ್ಲವೂ ಈ ರೀತಿ ಹೇಳ್ತಾ ಇದ್ದವೆ. ಆದ್ರೆ ಒಂದು ಸಲನು ಈ ಮಾತ್‌ನ ಸತ್ಯಾಂಶದ ಬಗ್ಗೆ ನಾವು ಯಾಕೆ ಗ್ಯಾನ ಮಾಡಿ ವಿಚಾರ ಮಾಡ್ತುಲೆ. ನಮ್ಮ ಜನಾಂಗದ ಹಿರಿಮೆ–ಗರಿಮೆಗಳನ್ನ ಸರಿಯಾಗಿ ಅರ್ಥಮಾಡಿಕಣದೆ ಬ್ಯಾರೆಯವು ಹೇಳ್ದ ಮಾತ್‌ಗೆ ತಲೆ ಆಡ್ಸುದು ಜಾಸ್ತಿ.

ನಮ್ಮ ಜನಾಂಗದ ಯಾವುದೇ ಸಮಾರಂಭ ನಡ್‌ದ್‌ರೂಸ ದೊಡ್ಡಂವ ಸಣ್ಣಂವತ ಹೇಳುವ ಭೇದ ಭಾವ ಇಂದಿಗೂ ಉಳ್ದುಟ್ಟ್. ಹಂಗೆನೇ ಆರೆಭಾಷೆ ಮಾತಾಡ್ರೆ ಎಲ್ಲಿ ಕೀಳ್ ತೇಳುವ ಬಾವನೆ ಸಹ ಉಟ್ಟ್. ಬೇರೆ ಜನಾಂಗದವ್ರ ಹಂಗೆ ನಮ್ಮ ಜನಾಂಗಲಿ ಒಗ್ಗಟ್ಟ್ ಯಾಕೆ ಇಲ್ಲೆ? ಈ ಅರೆಭಾಷೆನ ಬಡವನೆ ಮಾತಾಡುವೆತ ಹೇಳಿಕಂಡ್, ನಮ್ಮ ಜನಾಂಗದ ಶ್ರೀಮಂತ ಜನರೇ ಅರೆಭಾಷೆ ಬಗ್ಗೆ 'ಹೋತ್‌ಗಡ, ಬಾತ್‌ಗಡ, ಅಂಬುಲಿ ಮಡ್ಕೆ–ತೂತ್‌ಗಡ'ತ ಹೇಳ್ಕಂಡ್ ತಮ್ಮ ಭಾಷೆನ ಅವಮಾನ ಮಾಡ್ತೆ. ಇದ್ಕೆಲ್ಲಾಯಾರ್ ಜವಾಬ್ದಾರಿ. ಅವುಕ್ಕೆಲ್ಲ ನಮ್ಮ ಭಾಷೆಯ ಬಗ್ಗೆ ಗೌರವ ಬಾಕೆ ಸಾಧ್ಯನೇ ಇಲ್ಲೆನಾ? ನಮ್ಮ ಸಮಾಜದವು ಹಠ ತೊಟ್ಟರೆ ಇದ್ ಸಾಧ್ಯ ಆಕಿಲೆನಾ?

ನಮ್ಮ ಜನಾಂಗಲಿ ಒಗ್ಗಟ್ ಬರೊಕುತಾದರೆ ನಾವೆಲ್ಲ ನಮ್ಮ ಕುಟುಂಬದವರೊಟ್ಟಿಗೆ ಮೊದ್ಲ್ ಒಗ್ಗಟ್ಟ್‌ಲಿ ಇರೊಕು.

[20ನೇ ಪುಟ ನೋಡಿ]

# ಹುತ್ತೇರಿ ಹಾಡು

ಹುತ್ತೇರಿ ಹುತ್ತೇರಿ ಹುತ್ತೇರಿ ಕೊಡಗ್ ನಾಡ್‌ಲಿ
ಹುತ್ತೇರಿ ಹುತ್ತೇರಿ ಹುತ್ತೇರಿ ಗೌಡರ ಕುಲದೇವಂಗೆ
ಹುತ್ತೇರಿ ಹುತ್ತೇರಿ ಹುತ್ತೇರಿ ಗೌಡರ ಕುಲದೇವಿಗೆ
ಇಗ್ಗುತ್ತಪ್ಪ ವೆಂಕಟೇಶಂಗೆ ಸುಬ್ಬಮ್ಮ ಲಕ್ಷ್ಮಿ ಕಾವೇರಮ್ಮಂಗೆ

ಮನೆ ಮಗಳ್ ಮನೆ ಸೊಸೆ ಹೊರ್‌ಟೋ ನೋಡಿ ಲಕ್ಷ್ಮಿ ಪೂಜೆಗೆ
ಬಂದುಗ ಬಂದೋ ನೋಡಿ ಆನಂದ ಸಂತಸ
ಹಿರಿಯವರ ಆಶೀರ್ವಾದದಂಗೆ ಎತ್ತಿಕೊಟ್ಟೋ ಕಂಚಿಮಿನ

ಹುತ್ತೇರಿ............

ಕೊಂಬು ವಾಲಗ ಜೊತೆಗೆ ಹೊರ್‌ಟೋ ನಾವ್ ಬಯ್‌ಲಿಗೆ
ಬಾಗಿ ತೂಗಿ ನಿತ್ತಾ ಲಕ್ಷ್ಮೀ ದೇವಿಗೆ ಹೊಯ್ದೊ ಇಂದ್ ಹಾಲ್
ತುಪ್ಪನಾ ಹಿರಿ ತಾತ

ಫಲಿಯೇ ಬಾ ಫಲಿಯೇ ಬಾ ಫಲಿಯೇ ಬಾ ಫಲಿ ಫಲಿಯೇ ಬಾ
ಗುಂಡ್‌ನ ಹೂ ಮಾಲೆ ಪಟಾಕಿ ಮಲ್ಲಿಗೆ ಮಾಲೆ
ತಾಯಿನ ಪೂಜೆ ಮಾಡಿ ಲಕ್ಷ್ಮೀನ ಕರ್‌ಕಂಡ್ ಬಾಕನ, ಕದ್‌ರ್ನ ಕುಯ್ಯ್‌ಕಂಡ್
ಫಲಿ ಕರ್ದ್ ಲಕ್ಷ್ಮೀನ

ಫಲಿಯೇ ಬಾ............

ಲಕ್ಷ್ಮೀನ ಕರ್‌ಕಂಡ್ ಮನೆ ಮೆಟ್ಲ್ ಹತ್ತ್‌ಕಾನ ಹಿರಿ ಅವ್ವಾ
ಬಂದೋ ಕಾಲ್ ತೊಳ್‌ಸಿಕೆ
ಹಾಲ್ ಹಣ್ಣ್ ತುಪ್ಪಾಕುಡ್ದ್ ಬಲ ಕಾಲ್ ಮುಂದಿಟ್ಟ್
ಲಕ್ಷ್ಮೀಗೆ ಲಕ್ಷ್ಮೀಗೆ ಲಕ್ಷ್ಮೀಗೆ......ನೆಲೆ ಕೊಡಿಕೆ

ಫಲಿಯೇ ಬಾ............

ಆಲ ಹಲಸ್ ಅರಳಿ ಮಾವು ಮುತ್ತುಗದ ಎಲೆ ಹಾಕಿ
ಕಟ್ಟಿದೋ ಲಕ್ಷ್ಮೀನಾ ಎಲ್ಲಿಗೂ ಜಾರದಂಗೆ ಎಲ್ಲವೂ ಮನೆ ಮನೆಗೆ
ಕರ್‌ಕಂಡೋ ಲಕ್ಷ್ಮೀನಾ

ಹುತ್ತೇರಿ............

ಹೊಸ ಸೊಸೆ ಹೊಸ ನೀರ್ ತಂದ್ ಪಾಯಿಸ ಮಾಡಿ
ಒಬ್ಬಿಟ್ಟ್ ತಂಬ್ಬಿಟ್ ಗೆಣಸ್ ಪಾಯಿಸನ ಎಡೆ ಇಕ್ಕಿ ಕರ್‌ಕಂಡೋ
ಹಿಂತಾತ, ಹಿರಿ ಅವ್ವಾ
ಲಕ್ಷ್ಮೀನ ಲಕ್ಷ್ಮೀನ ಲಕ್ಷ್ಮೀನಾ...ನಮ್ಮ ಕುಲದೇವಿನಾ.
ಹುತ್ತೇರಿ............

—ಕೆದಂಬಾಡಿ ಜಯಶ್ರೀ, ಬಿಂದು, ಅಭ್ಯತ್‌ಮಂಗಲ.

## ನಗೆ ಹನಿಗ

[ಕ್ಯಾಂಪಸ್ಸ್‌ಲಿ ಮಾತಾಡ್‌ತ್ತಿದ್ದ ಪ್ರೇಮಿಗಳ್ನ ಕಂಡ್ ಪ್ರಿನ್ಸಿ ಸಿಟ್ಟ್‌ಲಿ ಹೇಳ್ದ.]

ಪ್ರಿನ್ಸಿ : 'ನೀವು ಹಿಂಗೆ ಮಾತಾಡ್ತದ್ದ್‌ರ್ನ ನಾ 2–3 ಸಲ ಕಂಡೋಳೆ.'

ಪ್ರೇಮಿಗ : 'ನಾವು ತುಂಬಾ ಸಲ ಮಾತಾಡ್ಯೊಳೊ ಸಾರ್, ಆದ್ರೆ ನೀವು ಕಂಡದ್ 2-3 ಸಲ ಮಾತ್ರಂತ' ಅವು ಹೇಳ್ವಾಕನ ಪ್ರಿನ್ಸಿ ಸುಸ್ತಾತ್.

O O O

ಮಾಸ್ಟರ್ : ಶೀಲಾ, ನಿದ್ರೆಗೆ ವಿರುದ್ಧ ಪದವೇನುತ ಹೇಳ್ವ್ಯಾ ?

ಶೀಲಾ : ಅವನಿದ್ರೆ ಸಾರ್ !

—ಗೀತಾ ಶ್ರೀ, ಮಡಿಕೇರಿ.

O O O

ಸೋಮಣ್ಣ ಮಾಸ್ಟ್ರ ಕಿಟ್ಟುನ ಕೇಳ್ದೊ 10ನೇ ಶತಮಾನದ ಕವಿಗಳ ಮತ್ತೆ ವಿಜ್ಞಾನಿಗಳ ಪರಿಚಯ ಉಟ್ರತ.

ಅದ್ಕೆ ಕಿಟ್ಟು ಹೇಳ್ತ್ ಮೊದ್ಲು ನನ್ನ ಪೂರ್ವಜನ್ಮಲಿ ಗೊತ್ತಿತ್ತ್. ಈ ಜನ್ಮಲಿ ನಂಗೆ ಮರ್ತ್ ಹೋತ್‌ಂತ.

—ಮುಳ್ಳಂಡ್ರ ಮಿಥುನ್, ಯವಕಪಾಡಿ.

## ಒಗ್ಗಟ್ ಯಾಕಿಲ್ಲೆ

[19ನೇ ಪುಟಂದ]

ಆಗ ನಮ್ಮ ಜನೆಲ್ಲ ಒಂದು ಸುಸಂಸ್ಕೃತಿ ಹೊಂದಿರ್ವ ಕುಟುಂಬ ಆಗಿ, ಪರಿಪೂರ್ಣ ಗೌಡ ಜನಾಂಗ ಆಕೆ ಸಾಧ್ಯ ಉಟ್ಟ್. ಬನ್ನಿ ನಾವೆಲ್ಲ ಸೇರಿ ನಮ್ಮ ಸಂಸ್ಕೃತಿ, ಭಾಷೆನ, ಆಚಾರ–ವಿಚಾರ, ಜನಾಂಗದ ಬಗ್ಗೆ ಅಭಿಮಾನ ಇವುಗಳ್ನೆಲ್ಲಾ ಸೇರ್ಸಿ 'ಹೂಮಾಲೆ' ಕಟ್ಟೊನೊ.

—ಯಾಲದಾಳು, ಈ ಚಂದ್ರಕಲಾ,
ಮಡಿಕೇರಿ.

"ಕೊಡಗು ಸಂಗಾತಿಯು ಬಳಗಕ್ಕೆ ಓದುಗ ಬಾಂಧವರಿಗೆ ಹೊಸವರ್ಷದ ಶುಭಾಶಯಗಳು"

## ಜೈನೀರ ಮತ್ತು ಬಂಧು ಮಿತ್ರರ ಕ್ಷೇಮಾಭಿವೃದ್ಧಿ ಸಂಘ

**ನಂ. ೭೦೮/೪೧ ಶ್ರೀ ರಾಮಾಂಜನೇಯ ರಸ್ತೆ, ಶ್ರೀನಗರ,**
**ಬೆಂಗಳೂರು-೫೦**

**ಮನವಿ :**

ಸಂಘದ ಕಾರ್ಯ ಚಟುವಟಿಕೆಯನ್ನು ಅರೆ ಭಾಷಿಕ ಗೌಡ ಬಂಧುಗಳಿಗೆ ವಿಸ್ತರಿಸಿ ಮುಂದೆ ನೋಂದಾಯಿತ ಸಹಕಾರ ಸಂಘವನ್ನಾಗಿ ಪರಿವರ್ತಿಸಿ ಸಾಲ ಸೌಲಭ್ಯ ಕಲ್ಪಿಸುವ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. ಬೆಂಗಳೂರಿನ ನಿವಾಸಿಗಳು ಚಂದ ನೀಡಿ ಸಂಘದ ಸದಸ್ಯರಾಗುವುದರೊಂದಿಗೆ ಸಹಕಾರ ಮತ್ತು ಮಾರ್ಗ ದರ್ಶನ ನೀಡಲು ವಿನಂತಿಸಲಾಗಿದೆ.

| ಸಂಪರ್ಕ : | | ದೂರವಾಣಿ ಸಂಖ್ಯೆ : | |
|---|---|---|---|
| ೧. **ಕ್ಯಾಪ್ಟನ್ ಶ್ರೀ ಡಿ. ಟಿ. ರಾಜು,** | ಅಧ್ಯಕ್ಷರು | ೮೫೬೧೫೬೨ | ನಿವಾಸ |
| ೨. **ಶ್ರೀ ಯು. ಎಲ್. ಸೋಮಪ್ಪ,** | ಕಾರ್ಯದರ್ಶಿ | ೬೬೭೧೭೨೧ | ಕಚೇರಿ |
| | | ೬೬೭೯೨೮೨ | ನಿವಾಸ |
| | | ೯೮೪೪೦೨೦೪೧೭ | ಮೊಬೈಲ್ |
| ೩. **ಶ್ರೀ ಕೆ. ಜೆ. ಜನಾರ್ಧನ,** | ಮೇಲ್ವಿಚಾರಕ ಸದಸ್ಯರು | ೩೩೦೪೨೬೭ | ಪಿ.ಪಿ. [ನಿವಾಸ] |
| ೪. **ಶ್ರೀ ಜೆ. ಬಿ. ಧನಂಜಯ,** | ಮೇಲ್ವಿಚಾರಕ ಸದಸ್ಯರು | ೩೩೦೮೦೧೭ | ನಿವಾಸ |
| | | ೩೪೧೪೨೯೫ | ಕಚೇರಿ |
| ೫. **ಶ್ರೀ ಜೆ. ಎಂ. ಪುಂಡರೀಶ,** | ಮೇಲ್ವಿಚಾರಕ ಸದಸ್ಯರು | ೨೨೧೪೩೬೯ | ನಿವಾಸ |
| ೬. **ಶ್ರೀ ಜೆ. ಜಿ. ರಾಜಕುಮಾರ್,** | ಖಜಾಂಚಿ | ೬೬೧೮೭೯ | ಪಿ.ಪಿ. [ನಿವಾಸ] |
| | | ೯೬೨೮೮೨೧೨೭೦ | ಪೇಜರ್ |

### ಕಣ್ಮಣಿ

**ಜಿ. ವಿ. ಭುವನ್ [G. V. BHUVAN]**
**ಗುಡ್ಡೇರ ಡಾ|| ಲತಾ ಮತ್ತು ವೇಣು ದಂಪತಿಗಳ ಪುತ್ರ**
**(Connectient U.S.A.)**



ಎಲ್ಲಾದರೂ ಇರು, ಆರೋಗ್ಯ, ಸುಖ, ಸಂತೋಷದಿಂದ ದೈವ ಭಕ್ತನಾಗಿ ಎಂದೆಂದಿಗೂ ನಗು ನಗುತ್ತಲೇ ಇರು ಎಂದು ನಿನ್ನ ಏಳನೆಯ ಹುಟ್ಟು ಹಬ್ಬದ ಸಮಯದಲ್ಲಿ ಆಶೀರ್ವದಿಸುವ ನಂಗಾರು ತಾತ, ಅಮ್ಮ, ರಕ್ತ ಒಡನಾಡಿಗಳಾದ ಬಿಂದ್ಯ, ಭಸಂತ್, ಆಕಾಶ್, ಅಮೃತ ಮತ್ತು ದಿವ್ಯ

**—ನಂಗಾರು ಅಪ್ಪಾಜಿ, ಬೆಂಗಳೂರು.**



### ಸವಿನೆನಪು

**ಜನನ**
**16-2-1932**
**ಮರಣ**
**8-1-1976**

**ಮಣ್ಣಾಂಡ್ರ ಕೆ. ಪೊನ್ನವ್ವ**

ನೀವು ನಮ್ಮನ್ನಗಲಿ ಇಂದಿಗೆ **23** ವರ್ಷ ಸಂದರೂ ನಿಮ್ಮ ಸವಿನೆನಪು ಇಂದಿಗೂ ನಮ್ಮ ಮನಸ್ಸಿನಲ್ಲಿ ಹಚ್ಚ ಹಸಿರಾಗಿಯೇ ಉಳಿದಿದೆ. ನಿಮ್ಮ ಆತ್ಮಕ್ಕೆ ಭಗವಂತನು ಸದಾ ಶಾಂತಿಯನ್ನು ನೀಡಲಿ ಎಂದು ಆಶಿಸುವ.

**ಪತಿ : ಮಣ್ಣಾಂಡ್ರ ಕುಂಞಪ್ಪ, ಮಕ್ಕಳು, ಸೊಸೆಯಂದಿರು, ಅಳಿಯಂದಿರು ಹಾಗೂ ಮೊಮ್ಮಕ್ಕಳು**

ಯವಕಪಾಡಿ ಗ್ರಾಮ, ಕಕ್ಕಬ್ಬೆ, ಕೊಡಗು

K R N N-240 10-01-96 TCI Kar. 09592

   



Printed by M K Thammaiah and Published by Kodagu Sangathi on behalf of Pattada P. Sheelamani & Printed at ASHIRWAD PRINTERS 180/A, 6th Main, Vinayakanagar, Mysore-1 Published at Mysore. Editor PATTADA P. SHEELAMANI. No 35 1st Cross, 4th Block, Near Divisional Telephone Office) Jayalakshmipuram, Mysore-570 012. Phone : 516771